# ಶಾಸ್ತ್ರಗಳ ಮೇರು : ಭಗವದ್‌ಗೀತೆ

—ಬನ್ನಂಜೆ ಗೋವಿಂದಾಚಾರ್ಯ.

ಸಂಸ್ಕೃತ ಸಾಹಿತ್ಯದಲ್ಲಿ ಗೀತೆಗಳು ಹಲವಾರಿವೆ: ಗೋಪೀಗೀತೆ-ಭ್ರಮರಗೀತೆ_ ಇತ್ಯಾದಿ. ಆದರೆ ಇವಾವುವೂ ಭಗವದ್ ಗೀತೆಗಳಲ್ಲ. ಬರಿಯ ಗೀತೆ ಎಂದಾಗ ನಮಗೆ ನೆನಪಾಗುವುದು ಭಗವದ್‌ಗೀತೆಯೊಂದೆ.

ಭಗವಂತನೆ ಉಪದೇಶಿಸಿದ ಇನ್ನೊಂದು ಗೀತೆ ಭಾಗವತದಲ್ಲಿದೆ– ಅದನ್ನು ಉದ್ಧವಗೀತೆ ಎಂದು ಕರೆಯುತ್ತಾರೆ. ಈ ಗೀತೆಯನ್ನು ಉಪದೇಶಿಸಿದ್ದೂ ಭಗವಂತನೆ. ಪ್ರಸಿದ್ಧವಾದ, ಮಹಾಭಾರತದ ಗೀತೆಯನ್ನು ಉಪದೇಶಿಸಿದ್ದ ಭಗವಂತನೆ. ಒಂದು ಉದ್ಧವನಿಗೆ ಉಪದೇಶಿಸಿದ್ದು; ಇನ್ನೊಂದು ಅರ್ಜುನನಿಗೆ.

ಭಗವಂತ ಉದ್ಧವನಿಗೆ ಉಪದೇಶಿಸಿದ ಗೀತೆ ಭಗವದ್‌ಗೀತೆಯಲ್ಲ; ಉದ್ಧವಗೀತೆ. ಆದರೆ ಭಗವಂತ ಅರ್ಜುನನಿಗೆ ಉಪದೇಶಿಸಿದ ಗೀತೆ ಅರ್ಜುನಗೀತೆಯಲ್ಲ; ಭಗವದ್‌ಗೀತೆ.

ಉದ್ಧವಗೀತೆ ಕೇಳಿದವನ ಹೆಸರಿನಲ್ಲಿ ಪ್ರಸಿದ್ಧವಾದರೆ ಭಗವದ್ಗೀತೆ ಹೇಳಿದವನ ಹೆಸರಿನಿಂದಲೆ ಖ್ಯಾತವಾಯಿತು. ಉದ್ಧವಗೀತೆಯನ್ನು ಭಗವಂತನೆ ಹೇಳಿದ್ದರೂ ಉದ್ಧವನಿಗಾಗಿ ಹೇಳಿದ ಗೀತೆ–ಅದರಿಂದ ಉದ್ಧವಗೀತೆ.

ಭಗವದ್ಗೀತೆ ಅರ್ಜುನನಿಗಾಗಿ ಮಾತ್ರವೆ ಹೇಳಿದ್ದಲ್ಲ. ಭಗವಂತ ತನಗಾಗಿಯೆ ಅದನ್ನು ಹೇಳಿದ. ಭಗವಂತನಿಗೇ ಅದನ್ನು ಹೇಳಬೇಕಾಗಿತ್ತು. ತನ್ನ ಈ ಉದ್ದೇಶಕ್ಕಾಗಿ ಅವನು ಅರ್ಜುನನನ್ನು ಮಾಧ್ಯಮವಾಗಿ ಬಳಸಿಕೊಂಡ– ಅಷ್ಟೆ. ಅದರಿಂದ ಇದು ಭಗವಂತನೆ ಬಯಸಿ ಹೇಳಿದ ಗೀತೆ; ಭಗವಂತನಿಗೆ ಅತಿ ಪ್ರಿಯವಾದ ಗೀತೆ. ಭಗವಂತನಿಗಾಗಿ, ಭಗವಂತನಿಂದ ರೂಪುಗೊಂಡ ಗೀತೆ. ಭಗವಂತನನ್ನು ಕುರಿತ ಗೀತೆ. ಭಗವಾನ್ ವ್ಯಾಸರಿಂದ ನಿಬದ್ಧವಾದ ಗೀತೆ. ಅದರಿಂದ ಇದು ಪೂರ್ಣ ಅರ್ಥದಲ್ಲಿ ಭಗವದ್ಗೀತೆ– ಎಲ್ಲ ಪುರಾಣಗಳೂ ಭಗವತ್ಪರವಾದರೂ ಭಾಗವತ ವಿಶೇಷತಃ ಆ ಹೆಸರಿಗೆ ಪಾತ್ರವಾದಂತೆ.

ಜಗತ್ತಿನಲ್ಲಿ ಅದ್ವಿತೀಯವಾದ ತತ್ತ್ವಗ್ರಂಥ, ಗಾತ್ರದಲ್ಲಿ ತುಂಬ ಕಿರಿದು; ಬರಿಯ 700 ಶ್ಲೋಕಗಳು. ಆದರೆ ಗುಣದಲ್ಲಿ ಹಿರಿದಕಿಂತಲು ಹಿರಿದು. ತತ್ತ್ವಶಾಸ್ತ್ರದಲ್ಲಿ ಇದಕ್ಕೆ ಎಣೆಯಾಗಬಲ್ಲ ಇನ್ನೊಂದು ಗ್ರಂಥ ಈ ತನಕ ನಿರ್ಮಾಣವಾಗಿಲ್ಲ; ಇನ್ನು ನಿರ್ಮಾಣವಾಗುವ ಸಂಭವವಿಲ್ಲ.

ಇಡಿಯ ವೈದಿಕ ಸಾಹಿತ್ಯದ ಸಾರ — ಮಹಾಭಾರತ. ಈ ದೇಶದ ತತ್ತ್ವಶಾಸ್ತ್ರ ಗ್ರಂಥಗಳಲ್ಲಿ ಸರ್ವೋತ್ಕೃಷ್ಟವಾದ ಗ್ರಂಥ "ಅತ್ಯರಿಚ್ಯತ ಭಾರತಮ್". ಗಾತ್ರದಲ್ಲಾಗಲಿ, ಗುಣದಲ್ಲಾಗಲಿ, ಇದಕ್ಕೆ ಸರಿಸಾಟಿಯಾದ ಗ್ರಂಥ ಜಗತ್ತಿನ ಇತಿಹಾಸದಲ್ಲಿ ಇನ್ನೊಂದು ರಚನೆಯಾಗಲಿಲ್ಲ:- "ಮಹತ್ತ್ವಾದ್ ಭಾರವತ್ತ್ವಾಚ್ಚ ಮಹಾಭಾರತಮುಚ್ಯತೇ ।"

ಇದು ಬರಿಯ ಭರತ ವಂಶದ ಕಥೆಯಲ್ಲ. ಅರ್ಥದ ಭಾರದಿಂದ ತುಂಬಿದ ಮೇರು ಕೃತಿ. ಅದರ ಅರ್ಥಭಾರಕ್ಕಾಗಿಯೇ ಅದು ಭಾರತ. ಆದರ ಬೃಹದ್ ಗಾತ್ರಕ್ಕಾಗಿಯೇ ಮಹಾರ್ಥ ಪ್ರತಿಪಾದನೆಯಿಂದಾಗಿಯೇ ಅದು"ಮಹಾಭಾರತ".

ಜ್ಞಾನದ ದಾರಿಯಲ್ಲಿ ಸಾಗುವವನಿಗೆ ತಿಳಿಯಬೇಕಾದ್ದು ಏನೆಲ್ಲ ಇದೆಯೋ ಅದೆಲ್ಲ ಇಲ್ಲಿದೆ. ಇಲ್ಲಿ ಇಲ್ಲದ್ದು ಇನ್ನೆಲ್ಲೂ ಇಲ್ಲ "ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ತತ್ ಕ್ವಚಿತ್."

ಇಂಥ ಮಹಾಭಾರತದ ಸಾರವೆ ಭಗವದ್ಗೀತೆ. ಇದು ಮಹಾಭಾರತವೆಂಬ ಪಾರಿಜಾತದ ಮಧುರಸ ಎನ್ನುತ್ತಾರೆ ಆಚಾರ್ಯಮಧ್ವರು. "ಮಹಾಭಾರತ ಪಾರಿಜಾತ ಮಧುಭೂತಾಂ ಗೀತಾಮ್..."

ಪ್ರಾಚೀನ ಪುರಾಣವಚನಗಳು ಗೀತೆಯ ಹಿರಿಮೆಯನ್ನು ತುಂಬ ಕಳಕಳಿಯಿಂದ ಉಗ್ಗಡಿಸಿವೆ:

ಭಾರತಂ ಸರ್ವಶಾಸ್ತ್ರೇಷು
ಭಾರತೇ ಗೀತಿಕಾ ವರಾ ।
ವಿಷ್ಣೋಃ ಸಹಸ್ರನಾಮಾಪಿ ಜ್ಞೇಯಂ ಪಾಠ್ಯಂ ಚ ತದ್ದ್ವಯಮ್ ॥

(2ನೇ ಪುಟದಿಂದ)

[ಎಲ್ಲ ಶಾಸ್ತ್ರಗಳ ಸಾರ ಭಾರತ. ಭಾರತದ ಸಾರ ಗೀತೆ ಮತ್ತು ವಿಷ್ಣುಸಹಸ್ರ ನಾಮ, ಇವೆರಡನ್ನು ತಿಳಿಯಲು ಪ್ರಯತ್ನಿಸಬೇಕು; ನಿತ್ಯ ಪಠಿಸಬೇಕು.]

ಶಾಸ್ತ್ರೇಷು ಭಾರತಂ ಸಾರಸ್ತತ್ರ ನಾಮಸಹಸ್ರಕಮ್ ।

ವೈಷ್ಣವಂ ಕೃಷ್ಣಗೀತಾ ಚ ತಜ್ಞಾನಾನ್ಮುಚ್ಯತೇಽಂಜಸಾ ॥

[ ಸರ್ವಶಾಸ್ತ್ರಸಾರವಾದ ಭಾರತದ ಸಾರ – ವಿಷ್ಣು ಸಹಸ್ರನಾಮ ಕೃಷ್ಣನ ಗೀತೆ. ಅದನ್ನು ತಿಳಿದವನಿಗೆ ಮೋಕ್ಷದ ದಾರಿ ತೆರೆದಿದೆ. ]

ತ್ರಯೋಽರ್ಥಾಃ ಸರ್ವವೇದೇಷು ದಶಾರ್ಥಾಃ ಸರ್ವಭಾರತೇ ।

ವಿಷ್ಣೋಃ ಸಹಸ್ರನಾಮಾಪಿ ನಿರಂತರಶತಾರ್ಥಕಮ್ ॥

[ ವೇದಗಳಿಗೆ ಮೂರು ಬಗೆಯ ಅರ್ಥ. ಭಾರತಕ್ಕೆ ಹತ್ತು ಬಗೆಯ ಅರ್ಥ ವಿವರಣೆಗಳು. ವಿಷ್ಣು ಸಹಸ್ರನಾಮದ ಒಂದೊಂದು ನಾಮಕ್ಕೆ ನೂರು ಬಗೆಯ ಅರ್ಥಗಳಿವೆ. ]

ಏವಮಧ್ಯಾತ್ಮನಿಷ್ಠಂ ಹಿ ಸರ್ವಂ ಭಾರತಮುಚ್ಯತೇ ।

[ ಭಾರತವೆಂದರೆ ಕುರುವಂಶದ ರಾಜರ ಅಂತಃಕಲಹದ ದುರಂತವನ್ನು ಚಿತ್ರಿಸುವುದಕ್ಕಾಗಿ ರಚನೆಗೊಂಡ ಬರಿಯ ಐತಿಹಾಸಿಕ ಗ್ರಂಥವಲ್ಲ. ಇಡಿಯ ಭಾರತವೂ ಅಧ್ಯಾತ್ಮದ ಅಂತರಂಗಾರ್ಥವನ್ನು ಒಳಗೊಂಡು ನಿರ್ಮಾಣವಾಗಿದೆ. ]

ಹೀಗೆ ಪ್ರಾಚೀನರು ಮಹಾಭಾರತವನ್ನು ಮತ್ತು ೧೮ ಪರ್ವಗಳ ಮಹಾಭಾರತದ ಸಾರಭೂತವಾದ ೧೮ ಅಧ್ಯಾಯಗಳ ಭಗವದ್‌ಗೀತೆಯನ್ನು ಅಧ್ಯಾತ್ಮಸಾಹಿತ್ಯದ ಉತ್ತುಂಗಶಿಖರದಲ್ಲಿಟ್ಟು ಗೌರವಿಸಿದ್ದಾರೆ. ಭಗವದ್‌ಗೀತೆಯ ಪ್ರಾಮಾಣಿಕ ಅಧ್ಯಯನದಿಂದ ಈ ಮಾತಿನ ಯಥಾರ್ಥತೆ ಅರಿವಾಗದಿರದು.

ಅಧ್ಯಾತ್ಮದ ದಾರಿಯಲ್ಲಿ ನಮ್ಮ ಮುಂದೆ ೧೮ ಮೌಲ್ಯಗಳನ್ನಿಟ್ಟು ದಾರಿತೋರುವ ಈ ಗ್ರಂಥ ತನ್ನ ಸಂಖ್ಯೆಯ ಮೂಲಕವೇ ಮೊದಲು ನಮ್ಮನ್ನು ಮುನ್ನಡೆಸುತ್ತದೆ. ಈ ೧೮ರ ವಿವರಣೆಯೆ ೧೮ ಪರ್ವಗಳಲ್ಲಿ ಹರವಿನಿಂತ ೧ ಲಕ್ಷ ಶ್ಲೋಕಗಳ ಮಹಾಭಾರತ; ೧೮ ಅಧ್ಯಾಯಗಳಲ್ಲಿ ಹರವಿನಿಂತ ೭೦೦ ಶ್ಲೋಕಗಳ ಭಗವದ್‌ಗೀತೆ.

ಸರ್ವೋಪನಿಷದೋ ಗಾವಃ
ದೋಗ್ಧಾ ಗೋಪಾಲನಂದನಃ ।
ಪಾರ್ಥೋ ವತ್ಸಃ ಸುಧೀರ್ಭೋಕ್ತಾ
ದುಗ್ಧಂ ಗೀತಾಮೃತಂ ಮಹತ್ ॥

[ ಉಪನಿಷತ್ತುಗಳೇ ಗೋವುಗಳು. ಭಗವಾನ್ ಶ್ರೀಕೃಷ್ಣನೇ ಹಾಲು ಕರೆಯುವ ಗೋವಳ. ಅರ್ಜುನನೆ ಕರು. ಸಜ್ಜನರೆಲ್ಲ ಈ ಹಾಲಿನ ಪಾಲುದಾರರು. ಕೃಷ್ಣ ಕರೆದ ಸವಿ ಹಾಲೇ ಭಗವದ್‌ಗೀತೆ. ]

ಈ ಗೀತಾಮೃತವನ್ನು ಸವಿಯಲು ಯಥಾಶಕ್ತಿ, ಯಥಾವಕಾಶ ನಾವೂ ಪ್ರಯತ್ನಿಸೋಣ.

# ಭಗವದ್ ಗೀತೆ

—ಬನ್ನಂಜೆ ಗೋವಿಂದಾಚಾರ್ಯ

ಶ್ರೀ ಕೃಷ್ಣ ಅರ್ಜುನನಿಗೆ 5 ಸಾವಿರ ವರ್ಷಗಳ ಹಿಂದೆ ಗೀತೋಪದೇಶ ಮಾಡಿದ. ಈ ಮಾತೇನೋ ನಿಜ. ಆದರೆ ಗೀತೆ ಸಾವಿರಾರು ವರ್ಷಗಳ ಹಿಂದಿನ ಐತಿಹಾಸಿಕ ಘಟನೆಯಾಗಿ ಮಾತ್ರವೆ ನಮಗೆ ಗ್ರಾಹ್ಯವಲ್ಲ. ಅದು ಐದು ಸಾವಿರ ವರ್ಷಗಳ ಹಿಂದೆ, ಕುರುಕ್ಷೇತ್ರದಲ್ಲಿ ಕೌರವ ಪಾಂಡವರ ಯುದ್ಧದಲ್ಲಿ ನಡೆದ ಘಟನೆಯಷ್ಟೇ ಅಲ್ಲ, ಅದು ನಮ್ಮದೇ ಇತಿಹಾಸ.

ಕುರುಕ್ಷೇತ್ರ ಎಲ್ಲೋ ಉತ್ತರ ಭಾರತದಲ್ಲಿರುವ ಒಂದು ಭೂಭಾಗವಲ್ಲ, 'ನಮ್ಮೆಲ್ಲರ ಹೃದಯ ಕ್ಷೇತ್ರವೆ ಕುರುಕ್ಷೇತ್ರ. ನಮ್ಮ ಕರ್ಮಕ್ಷೇತ್ರವಾದ ನಮ್ಮ ಬದುಕೇ ಕುರುಕ್ಷೇತ್ರ.

ನಮ್ಮೊಳಗೆಯೆ ಮಹಾಭಾರತ ಯುದ್ಧ ನಡೆಯುತ್ತಿದೆ. ನಮ್ಮೊಳಗೆಯೆ ಕೌರವರಿದ್ದಾರೆ; ಪಾಂಡವರಿದ್ದಾರೆ! ಹದಿನೆಂಟು ಅಕ್ಷೋಹಿಣಿ ಸೇನೆಗಳಿವೆ.

ನಮ್ಮೊಳಗಿನ ದುರ್ಯೋಧನ ಇನ್ನೊಬ್ಬರ ಆಸ್ತಿಯನ್ನು ಲಪಟಾಯಿಸು ಎನ್ನುತ್ತಿರುತ್ತಾನೆ. ನಮ್ಮೊಳಗಿನ ದುಃಶ್ಯಾಸನ ಪರಸ್ತ್ರೀಯರ ಮೇಲೆ ಕೈ ಮಾಡಲು ಹಾತೊರೆಯುತ್ತಿರುತ್ತಾನೆ. ನಮ್ಮೊಳಗಿನ ವಿಕರ್ಣ ಸಜ್ಜನಿಕೆಯ ಮುಖವಾಡದ ಮಾತುಗಳನ್ನಾಡುತ್ತ ನಮ್ಮೊಳಗಿನ ಹುಳಕನ್ನು ಮುಚ್ಚಿಡಲು ಪ್ರಯತ್ನಿಸುತ್ತಾನೆ. ಸಾವಿರ ಸಾವಿರ ದುಷ್ಟವೃತ್ತಿಗಳು ಇದನ್ನು ಆಗಗೊಡಲು ನಮ್ಮೊಳಗೆ ಶಸ್ತ್ರ ಹಿಡಿದು ಸಜ್ಜಾಗಿ ನಿಂತಿವೆ.

ಇಂಥವರ ನಡುವೆಯೂ ನಮ್ಮೊಳಗಿನ ಧರ್ಮರಾಜ 'ಛೇ, ಹೀಗೆಲ್ಲ ಮಾಡಬೇಡ' ಎನ್ನುತ್ತಿರುತ್ತಾನೆ. ಭೀಮಾರ್ಜುನರು 'ಇದರ ವಿರುದ್ಧ ಹೋರಾಡು' ಎನ್ನುತ್ತಿರುತ್ತಾರೆ, ನಕುಲ 'ಶೀಲ ಕಳೆದುಕೊಂಡು ಕೆಟ್ಟ ಬಾಳು ಬದುಕಬೇಡ' ಎಂದು ಎಚ್ಚರಿಸುತ್ತಾನೆ. ಸಹದೇವ 'ದುರಹಂಕಾರಿಯಾಗಿ ದಾರಿ ತಪ್ಪಬೇಡ' ಎಂದು ಬೆನ್ನುತಟ್ಟುತ್ತಾನೆ. ಸಜ್ಜನಿಕೆಯ ಪುಟ್ಟ ಸೇನೆ ಇವರ ಪರವಾಗಿ ನಮ್ಮೊಳಗೆ ಕಾದಾಟಕ್ಕೆ ಸಿದ್ಧವಾಗಿದೆ.

ನಮ್ಮ ಬದುಕಿನಲ್ಲೇ ನಡೆಯುವ ಈ ಧರ್ಮಾಧರ್ಮಗಳ, ಸಜ್ಜನಿಕೆ – ದೌರ್ಜನ್ಯಗಳ, ಒಳಿತು - ಕೆಡುಕುಗಳ, ನೀತಿ - ಅನೀತಿಗಳ, ಮಾನವೀಯತೆ - ದಾನವೀಯತೆಗಳ ನಡುವಣ ಈ ನಿರಂತರ ಯುದ್ಧದಲ್ಲಿ ಹೆಚ್ಚಿನ ಸಂದರ್ಭಗಳಲ್ಲಿ ಕೌರವರೇ ಗೆಲ್ಲುತ್ತಾರೆ. ನಾವು ಕೌರವರು ಹೇಳಿದಂತೆಯೇ ನಡೆದುಕೊಂಡು ಬಿಡುತ್ತೇವೆ. ಪಾಂಡವರು ತೆಪ್ಪಗೆ ಸೋತು ಕಾಡುಪಾಲಾಗುತ್ತಾರೆ.

ಇಂಥ ಸಂದರ್ಭದಲ್ಲಿ ಗೀತೆ ನಮ್ಮನ್ನು ಎಚ್ಚರಿಸುತ್ತದೆ. ''ನಿನ್ನೊಳಗೆ ನಡೆಯುವ ಯುದ್ಧದಲ್ಲಿ ಕೌರವರು ಗೆಲ್ಲುವಂತೆ ಮಾಡಿಕೊಂಡು ನಿನ್ನ ಬಾಳನ್ನು ಹಾಳು ಮಾಡಿಕೊಳ್ಳಬೇಡ. ಕೌರವರು ಗೆಲ್ಲುವುದು ಎಂದರೆ ನೀನು ಸೋಲುವುದು ಎಂದೇ ಅರ್ಥ.

ಪಾಂಡವರು ಗೆಲ್ಲುವುದೆಂದರೆ ನೀನೇ ಗೆಲ್ಲುವುದು ಎಂದರ್ಥ. ಆದರಿಂದ ಎಲ್ಲ ಸಂದರ್ಭದಲ್ಲೂ ಪಾಂಡವರು ಗೆಲ್ಲುವಂತೆ ನೋಡಿಕೋ. ನೀನು ಕೌರವನಾಗಬೇಡ, ಅರ್ಜುನನಾಗು. ನಿನಗೆ ಭೀಮನ ಬೆಂಬಲವಿರಲಿ; ಧರ್ಮದ ನೆರವಿರಲಿ, ನಿನ್ನ ಬದುಕಿನ ಸಾರಥ್ಯವನ್ನು ಶ್ರೀಕೃಷ್ಣನಿಗೆ ಒಪ್ಪಿಸು''.

ಮನುಷ್ಯನ ಮಾನಸಿಕ ಸಮಸ್ಯೆಗಳಿಗೆಲ್ಲ ಸಾರ್ವಕಾಲಿಕವಾದ ಉತ್ತರ ನೀಡುವ ಗ್ರಂಥ ಭಗವದ್ಗೀತೆ. ಆದರಿಂದಲೇ ಅದು ಯಾವುದೋ ಕಾಲಕ್ಕೆ, ಯಾವುದೋ ಒಂದು ವರ್ಗದ ಜನಕ್ಕೆ ಮಾತ್ರ ಸೀಮಿತವಾದ ಗ್ರಂಥವಲ್ಲ. ಒಂದು ಧರ್ಮದ ಜನಕ್ಕೆ ಮಾತ್ರವೇ ಗ್ರಾಹ್ಯವಾದ ಧಾರ್ಮಿಕ ಗ್ರಂಥವಲ್ಲ. ಕಾಲದೇಶಗಳ ಸೀಮೆಯನ್ನು ದಾಟಿ ನಿಲ್ಲಬಲ್ಲ ಮಹಾನ್ ಗ್ರಂಥ.

ಗೀತೆ ಬರಿಯ ಅಧ್ಯಾತ್ಮ ಗ್ರಂಥವಲ್ಲ. ಜಗತ್ತಿನ ಮೊತ್ತಮೊದಲ ಮನಃಶಾಸ್ತ್ರೀಯ ಗ್ರಂಥವೂ ಹೌದು. ಯಾವ ಮನಃಶಾಸ್ತ್ರದ ಸಮಸ್ಯೆಗೂ ಗೀತೆ ಉತ್ತರಿಸದೆ ಬಿಡುವುದಿಲ್ಲ. ಆದರೆ ದಡ್ಡರಿಗೆ ಯಾವ ಮದ್ದೂ ಉಪಯೋಗವಿಲ್ಲ. ಸಾಯ ಹೊರಟವನಿಗೆ ಮದ್ದು ಅಸಹ್ಯವಾಗುತ್ತದೆ. ಅವನು ಮದ್ದನ್ನೇ ದ್ವೇಷಿಸುತ್ತಾನೆ; ಅಂತತಃ ತನ್ನ ಬದುಕನ್ನೇ ದ್ವೇಷಿಸುತ್ತಾನೆ.

ಇಂಥ ಒಂದು ಅದ್ಭುತ ಗ್ರಂಥ ನಮ್ಮ ದೇಶದಲ್ಲಿ ನಿರ್ಮಾಣವಾಗಿದೆ ಅನ್ನೋದು ನಮಗೆಲ್ಲ ಹೆಮ್ಮೆಯ ಸಂಗತಿಯಾಗಿರಬೇಕು. 'ಗೀತೆಯ ದೇಶದಿಂದ ಬಂದವರು' ಎಂದು ವಿದೇಶೀಯರು ನಮ್ಮನ್ನು ಗೌರವದಿಂದ ಕಾಣುವುದನ್ನು ನಾನು ಕಂಡು ದಂಗಾಗಿದ್ದೇನೆ. ಆದರೆ ನಮ್ಮ ಜನ ಇಷ್ಟು ದೊಡ್ಡ ಸಂಪತ್ತು ನಮ್ಮ ಬಳಿಯೇ ಇದ್ದೂ ಜ್ಞಾನದರಿದ್ರರಾಗಿ ಬದುಕುತ್ತಿದ್ದಾರೆ. ದಡ್ಡತನಕ್ಕೆ ಮದ್ದೇ ಇಲ್ಲ. ತಮಗೆ ಏನೂ ಗೊತ್ತಿಲ್ಲ ಎನ್ನುವುದೂ ಗೊತ್ತಿಲ್ಲದೆ ಇದ್ದವರನ್ನು ಯಾರು ಕಾಪಾಡಬೇಕು!

ಇಂಥ ಭಗವದ್ಗೀತೆ ರಚನೆಯಾದ ಹಿನ್ನೆಲೆಯೂ ಒಂದು ವಿಚಿತ್ರ. ಕುರುಕ್ಷೇತ್ರದ ಸುತ್ತ-ಮುತ್ತ ಆಚೆ ಹನ್ನೊಂದು ಈಚೆ ಏಳು ಅಕ್ಷೋಹಿಣಿ ಸೇನೆಗಳು ಯುದ್ಧಕ್ಕೆ ಸಿದ್ಧವಾಗಿ ಎದುರು ಬದುರು ನಿಂತಿವೆ. ಎರಡೂ ಕಡೆ ಯುದ್ಧದ ಕಹಳೆ ಮೊಳಗಿಯಾಗಿದೆ. ಅಂಥಲ್ಲಿ ಅರ್ಜುನನಿಗೆ ಸಂಶಯ ಬಂತು. ''ಈ ಯುದ್ಧದಲ್ಲಿ ತೊಡಗುವುದು ಎಷ್ಟರ ಮಟ್ಟಿಗೆ ಸರಿ?" ಈ ಮಾನಸಿಕ ಸಮಸ್ಯೆಗೆ ಉತ್ತರ ರೂಪವಾಗಿ ಗೀತೆ 700 ಶ್ಲೋಕಗಳಲ್ಲಿ ಹರಿದು ಬಂತು.

ಕೆಲವರಿಗೆ ಇನ್ನೂ ಸಂಶಯ: 18 ಅಕ್ಷೋಹಿಣಿ ಸೇನೆ ಕುರುಕ್ಷೇತ್ರದಂಥ ಪುಟ್ಟ ಜಾಗದಲ್ಲಿ ಜಮಾಯಿಸುವುದೆಂದರೇನು? ಯುದ್ಧ ಸುರುವಾದಾಗ ಇದ್ದಕಿದ್ದಂತೆ ಅರ್ಜುನನಿಗೆ ಸಂಶಯ ಬರುವುದೆಂದರೇನು? ಯುದ್ಧ ನಡೆಯುತ್ತಿರುವಾಗ ಕೃಷ್ಣ ತಾಸುಗಟ್ಟಲೆ ಉಪದೇಶ ಮಾಡುವುದೆಂದರೇನು? ಅಷ್ಟು ಹೊತ್ತು ಎದುರುಗಡೆಯ ಸೈನಿಕರು ಕೈ ಕಟ್ಟಿ ನಿಂತರೇನು?

ನಾವು ಹಿಂದೆ ನೋಡಿದ ಮನಃಶಾಸ್ತ್ರೀಯ ವಿವರಣೆಯಲ್ಲಿ ಇವಕ್ಕೆಲ್ಲ ಉತ್ತರ ನೀಡ

ಬೇಕಾಗಿಲ್ಲ. ಮಾನಸಿಕವಾಗಿ ಇಂಥ ತುಮುಲದಲ್ಲಿಯೆ ಪರಿಹಾರದ ಆವಶ್ಯಕತೆ ಇದು ಪ್ರಮ ಸಮೃದ್ಧಿಯಾಗಿ ಬದುಕುವವನಿಗೆ ಸ್ವರ್ಗೋತ್ತರವು ಯಾಕೆ ಬೇಕು?

ಅದರ ಇನ್ನೊಂದು ಐತಿಹಾಸಿಕ ಮುಖವೂ ಉಂಟು. ಭಾರತವನ್ನು ಪ್ರಾಚೀನರು ಪುರಾಣವೆಂದು ಕರೆದಿಲ್ಲ. ಇತಿಹಾಸವೆಂದೇ ಕರೆದಿದ್ದಾರೆ. ಐತಿಹಾಸಿಕವಾಗಿಯೂ ಇದರ ಹಿನ್ನಲೆಯನ್ನು ಅರಿಯುವುದು ಅವಶ್ಯವಾಗಿದೆ.

18 ಅಕ್ಷೋಹಿಣೀ ಸೇನೆ ನಿಂತ ಶಿಬಿರ ಸನ್ನಿವೇಶವನ್ನು ಮಹಭಾರತ ಸ್ಪಷ್ಟವಾಗಿ ವರ್ಣಿಸಿದೆ. ಇದಕ್ಕೆ ಮೊದಲು ಅಕ್ಷೋಹಿಣಿ ಎಂದರೆ ಎಷ್ಟು ಸೇನೆ ಎನ್ನುವುದನ್ನು ಮೊದಲು ತಿಳಿಯೋಣ:

ಸೇನೆಗೆ ನಾಲ್ಕು ಅಂಗಗಳು: ಆನೆ, ರಥ, ಕುದುರೆ ಮತ್ತು ಕಾಲಾಳುಗಳು. ಅದ ಕೆಂದೆ ಚತುರಂಗ ಸೇನೆ ಎನ್ನುವುದು. ಕ್ರಮವಾಗಿ ಈ ಸೇನಾಂಗಗಳ ವಿಭಾಗವನ್ನು ಪ್ರಾಚೀನರು ಹೀಗೆ ಮಾಡಿದ್ದಾರೆ:

| | | | | | |
|---|---|---|---|---|---|
| 1. | ಪತ್ತಿ — | 1 ಆನೆ | 1 ರಥ | 3 ಕುದುರೆ | 5 ಕಾಲಾಳುಗಳು |
| 2. | ಸೇನಾಮುಖ — | 3 ,, | 3 ,, | 9 ,, | 15 ,, |
| 3. | ಗುಲ್ಮ — | 9 ,, | 9 ,, | 27 ,, | 45 ,, |
| 4. | ಗಣ — | 27 ,, | 27 ,, | 81 ,, | 135 ,, |
| 5. | ವಾಹಿನೀ — | 81 ,, | 81 ,, | 243 ,, | 405 ,, |
| 6. | ಪೃತನಾ — | 243 ,, | 243 ,, | 729 ,, | 1215 ,, |
| 7. | ಚಮೂ — | 729 ,, | 729 ,, | 2187 ,, | 3645 ,, |
| 8. | ಅನೀಕಿನೀ — | 2187 ,, | 2187 ,, | 6561 ,, | 10935 ,, |
| 9. | ಅಕ್ಷೋಹಿಣೀ— | 21870 ,, | 21870 ,, | 65610 ,, | 109350 ,, |

ಈ ಪ್ರಮಾಣದಂತೆ 18 ಅಕ್ಷೋಹಿಣಿಯಲ್ಲಿ ಒಟ್ಟು ಸೇನಾ ಪ್ರಮಾಣ:

ಆನೆಗಳು: 3,93,660

ರಥಗಳು: 3,93,660

ಕುದುರೆಗಳು: 11,80,980

ಕಾಲಾಳುಗಳು: 19,68,300

ಆನೆ- ಕುದುರೆ- ರಥಗಳಲ್ಲಿದ್ದವರೂ ಸೇರಿ ಸುಮಾರು 50 ಲಕ್ಷ ಜನ 18 ದಿನದ ಈ ಮಹಾ ಯುದ್ಧದಲ್ಲಿ ಭಾಗವಹಿಸಿದ್ದಾರೆ ಇಷ್ಟು ಮಂದಿಯ ಯೋಗಕ್ಷೇಮ ನೋಡುವ ಪರಿವಾರದವರು, ಅಡಿಗೆಮಂದಿ, ಕೆಲಸದಾಳುಗಳು ಮತ್ತು ವೈದ್ಯರು ಅಗಾಧವಾದ ಜನಸ್ತೋಮ. ಜತೆಗೆ ಸುಮಾರು 12 ಲಕ್ಷ ಕುದುರೆಗಳು ಬಿಡಿಯಾಗಿ ಮತ್ತು ರಥಕ್ಕೆ ಕಟ್ಟಿದ ಕುದುರೆಗಳು 4–5 ಲಕ್ಷ. ಸುಮಾರು 4 ಲಕ್ಷ ರಥಗಳು ಮತ್ತು ಅಷ್ಟೇ ಆನೆಗಳು.

ಇದರ ಸೇನಾ ಶಿಬಿರ ಎಷ್ಟು ವಿಸ್ತಾರವಾಗಿರಬೇಡ! ಮಹಾಭಾರತ ಇದನ್ನು

ವಿವರವಾಗಿಯೆ ವರ್ಣಿಸುತ್ತದೆ. ಹಲವಾರು ಮೈಲುಗಳ ವಿಸ್ತಾರದಲ್ಲಿ ಈ ಸೇನೆಯ ಶಿಬಿರಗಳು ಹರಡಿಕೊಂಡಿದ್ದವು. ಕುರುಕ್ಷೇತ್ರದಲ್ಲಷ್ಟೇ ಅಲ್ಲ. ಈ ಮಾತನ್ನು ಭಾರತ ಸ್ಪಷ್ಟವಾಗಿ ಹೇಳುತ್ತದೆ. ಕುರುಕ್ಷೇತ್ರ ಯುದ್ಧದ ಕೇಂದ್ರ ಸ್ಥಾನ. ಎರಡು ಸೇನೆಗಳು ಎದುರು ಬದುರಾಗಿ ಯುದ್ಧ ಪ್ರಾರಂಭಿಸಿದ ಕ್ಷಣ, ಎದುರಿನ ಸೇನೆ ನಾಶವಾದಂತೆ ಹಿಂದಿನ ಸೇನೆಗಳು ಮುಂದೆ ಬಂದವು. ಹೀಗೆ 18 ದಿನಗಳಲ್ಲಿ ಎಲ್ಲಾ ಸೇನೆಯೂ ನಾಶವಾಯಿತು. ಯುದ್ಧರಂಗದ ಪ್ರತ್ಯಕ್ಷದರ್ಶಿಗಳು ವಿವರಿಸುವಂತೆ ಮಹಾಭಾರತ ಇವನ್ನು ಕಣ್ಕಟ್ಟುವಂತೆ ವಾಸ್ತವವಾಗಿ ಚಿತ್ರಿಸುತ್ತದೆ. ಜಿಜ್ಞಾಸೆಯುಳ್ಳವರು ಆ ಭಾಗವನ್ನು ಪರಿಶೀಲಿಸಬೇಕು.

ಮುಂದಿನ ಜಿಜ್ಞಾಸೆ ಇಂಥ ಗೊಂದಲದಲ್ಲಿ ತಾಸುಗಟ್ಟಲೆ ಉಪದೇಶ ನೀಡುವುದು ಸಾಧ್ಯವೇ ಎನ್ನುವುದು. ಗೀತೆಯ ಬಗ್ಗೆ ಏನೂ ಅರಿಯದ ಮಂದಿ ಮಾತ್ರವೆ ಮಾಡಬಹುದಾದ ಪ್ರಶ್ನೆ ಇದು.

ಕೃಷ್ಣಾರ್ಜುನರ ಸಂವಾದ ತಾಸುಗಟ್ಟಲೆ ನಡೆದೇ ಇಲ್ಲ. ಅರ್ಜುನನ ಸಂದೇಹಗಳಿಗೆ ಕೃಷ್ಣ ಉತ್ತರ ಕೊಟ್ಟ. ಅರ್ಜುನನಿಗೆ ತೃಪ್ತಿಯಾಯಿತು. ಇತರರು ಏನು ಎಂತು ಎಂದು ಯೋಚಿಸುವ ಮುನ್ನ ಯುದ್ಧ ಪ್ರಾರಂಭವಾಗಿ ಹೋಯಿತು.

ಈ ಸಂವಾದ ಕೆಲವು ನಿಮಿಷಗಳ ಕಾಲ ನಡೆದಿತ್ತೋ ಇಲ್ಲವೋ, ಕೃಷ್ಣ ಅರ್ಜುನನಿಗೆ ಚುಟುಕಾಗಿ ಹೇಳಿದ ಆ ಮಾತುಗಳನ್ನು ಮುಂದಿನ ಜನಾಂಗಕ್ಕೂ ಅರ್ಥವಾಗುವಂತೆ ವೇದವ್ಯಾಸರು ವಿಸ್ತಾರವಾಗಿ ದಾಖಲಿಸಿದರು.

ಬುದ್ಧಿವಂತನಾದ ಅರ್ಜುನನಿಗೆ ಕೃಷ್ಣನ ಕೆಲವೇ ಮಾತುಗಳು ಸಾಕಾಯಿತು. ಸಾಮಾನ್ಯ ಜನಕ್ಕೂ ಅರ್ಥವಾಗಲಿ ಎಂದು ವ್ಯಾಸರು ಅದನ್ನು ವಿಸ್ತಾರವಾಗಿ ಬಿಡಿಸಿ, ಬಿಡಿಸಿ ಹೇಳಿದರು. ಹೀಗೆ ಗೀತೆ 700 ಶ್ಲೋಕಗಳಲ್ಲಿ ಬೆಳೆದು ನಿಂತಿತು.

ಆದರೂ ಜನರಿಗೆ ಅರ್ಥವಾಗಲಿಲ್ಲ. ಅದಕೆಂದೇ ಮುಂದಿನ ಆಚಾರ್ಯ ಪುರುಷರು ಸಾವಿರ ಸಾವಿರ ಪುಟಗಳಲ್ಲಿ ಅದನ್ನು ಮತ್ತೆ ವಿಸ್ತರಿಸಿದರು.

ಸದ್ಯ ನಮ್ಮ ಉದ್ದೇಶ ಆ ಆಚಾರ್ಯ ಪುರುಷರ ವ್ಯಾಖ್ಯಾನಗಳಲ್ಲಿ ಮೂಡಿ ಬಂದ ಅಭಿಪ್ರಾಯವನ್ನು ಸಂಗ್ರಹಿಸುವುದೇ ಆಗಿದೆ.

ಗೀತೆಯ ಅನೇಕ ಭಾಷ್ಯಗಳಲ್ಲಿ ಮತತ್ರಯಾಚಾರ್ಯರ ಭಾಷ್ಯಗಳೆ ಮೌಲಿಕತೆಗಾಗಿ ಹೆಚ್ಚು ಪ್ರಸಿದ್ಧವಾಗಿವೆ. ಉಳಿದ ನೂರಾರು ಟೀಕೆಗಳು ಈ ಮೂರರ ಹೆಜ್ಜೆ ಜಾಡಿನಲ್ಲೆ ನಡೆದಂಥವು.

ಕಾಲ ಕ್ರಮದಲ್ಲಿ ಮೊದಲನೆಯದು ಆಚಾರ್ಯ ಶಂಕರರ ಭಾಷ್ಯ. ಎರಡನೆಯದು ಆಚಾರ್ಯ ರಾಮಾನುಜರ ಭಾಷ್ಯ. ಮೂರನೆಯದು ಆಚಾರ್ಯ ಮಧ್ವರ ಭಾಷ್ಯ.

ಈ ಮೂರೂ ಭಾಷ್ಯಗಳ ಬೆಳಕಿನಲ್ಲಿ ಗೀತೆ ನಮಗೆ ಯಾವ ಸಂದೇಶ ನೀಡುತ್ತದೆ ಎನ್ನುವುದನ್ನು ಮುಂದಿನ ಲೇಖಾಂಕಗಳಲ್ಲಿ ನೋಡೋಣ. ★

# ಭಗವದ್‌ಗೀತೆ

ಬನ್ನಂಜೆ ಗೋವಿಂದಾಚಾರ್ಯ

## ಆಚಾರ್ಯ ಶಂಕರರ ಪ್ರಸ್ತಾವನೆ

ಭಗವಾನ್ ನಾರಾಯಣ ಈ ಜಗತ್ತನ್ನು ಸೃಷ್ಟಿಸಿದ, ಅದರ ರಕ್ಷಣೆಗಾಗಿ ಮರೀಚಿ ಮುಂತಾದ ಪ್ರಜಾಪತಿಗಳನ್ನು ಮೊದಲು ಹುಟ್ಟಿಸಿ ಅವರ ಮೂಲಕ ಪ್ರವೃತ್ತಿಮಾರ್ಗದ ವೇದ ಧರ್ಮವನ್ನು ಪ್ರಚುರಗೊಳಿಸಿದ, ಅನಂತರ ಸನಕ - ಸನಂದನ ಮುಂತಾದವರನ್ನು ಸೃಷ್ಟಿಸಿದ. ಅವರ ಮೂಲಕ ಜ್ಞಾನ- ವೈರಾಗ್ಯ ರೂಪವಾದ ನಿವೃತ್ತಿಧರ್ಮವನ್ನೂ ಬೋಧಿಸಿದ.

ಹೀಗೆ ವೈದಿಕ ಧರ್ಮಕ್ಕೆ ಎರಡು ಮುಖಗಳು ಪ್ರವೃತ್ತಿ ಧರ್ಮ ಮತ್ತು ನಿವೃತ್ತಿ ಧರ್ಮ.

ಅದರಲ್ಲಿ ಒಂದು ಜಗತ್ತಿನ ಇರವಿಗೆ ಕಾರಣವಾದದ್ದು. ಸಮಸ್ತ ಜೀವಿಗಳ ಅಭ್ಯುದಯ ಮತ್ತು ಮೋಕ್ಷಗಳಿಗೆ ನೇರ ಕಾರಣವಾದದ್ದೆ ಧರ್ಮ. ಬ್ರಾಹ್ಮಣಾದಿ ಚತುರ್ವರ್ಣಗಳು, ಬ್ರಹ್ಮಚಾರ್ಯಾದಿ ನಾಲ್ಕು ಆಶ್ರಮಗಳು ಶ್ರೇಯಸ್ಸಿನ ಬಯಕೆಯಿಂದ ಅದನ್ನು ಅನುಷ್ಠಾನಕ್ಕೆ ತಂದರು.

ಬಹಳ ಕಾಲ ಹೀಗೆಯೆ ನಡೆಯಿತು. ಯುಗಯುಗಗಳು ಸಂದವು. ಮನುಷ್ಯನಿಗೆ ದುರಾಸೆ ಬೆಳೆಯಿತು. ಆಚರಣೆಯಲ್ಲಿ ವಿವೇಕ- ವಿಜ್ಞಾನಗಳು ಮಸಕಾದವು. ಅಜ್ಞಾನ, ಅಂಧಶ್ರದ್ಧೆ, ಅಶ್ರದ್ಧೆ ಬೆಳೆಯಿತು. ಧರ್ಮ ಶಿಥಿಲವಾಯಿತು. ಅಧರ್ಮ ತಲೆಯೆತ್ತಿ ತಿರುಗಾಡ ತೊಡಗಿತು.

ಜಗತ್ತಿನ ಸುವ್ಯವಸ್ಥೆಯ ಪಾಲನೆಗಾಗಿ ಮತ್ತೆ ಆದಿಕಾರಣನಾದ ನಾರಾಯಣ ಬಯಸಿದ ಭೂಮಿಯ ದೇವತೆಗಳಾದ, ವೇದರಕ್ಷಕರಾದ ಬ್ರಾಹ್ಮಣರ (ಬ್ರಹ್ಮಜ್ಞಾನಿಗಳ) ರಕ್ಷಣೆಗಾಗಿ ತಾನೆ ವಸುದೇವ - ದೇವಕಿಯರಲ್ಲಿ ಮಗನಾಗಿ ಜನಿಸಿದ, ಕೃಷ್ಣನಾಗಿ ಅವತರಿಸಿದ.

ಬ್ರಹ್ಮಜ್ಞಾನದ ನೆಲೆಯಾದ ಬ್ರಾಹ್ಮಣ್ಯದ ರಕ್ಷಣೆಯೆಂದರೆ ಒಂದು ವರ್ಗದ ರಕ್ಷಣೆಯೆಂದು ಅರ್ಥವಲ್ಲ. ಇಡಿಯ ಮಾನವ ಕುಲದ ಸೊತ್ತಾದ ಸನಾತನ ಧರ್ಮದ, ವೇದಧರ್ಮದ ರಕ್ಷಣೆ ಅದರಿಂದ ವರ್ಣಾಶ್ರಮ ಧರ್ಮದ ರಕ್ಷಣೆ.

ಭಗವಾನ್ ಶ್ರೀಕೃಷ್ಣ ಜ್ಞಾನ, ಈಶ್ವರಭಾವ, ಶಕ್ತಿ, ಬಲ, ವೀರ್ಯ, ತೇಜಸ್ಸು ಎಂಬ ಈ ಆರು ಗುಣಗಳಿಂದ ಸದಾ ಪರಿಪೂರ್ಣನಾದ ಹಿರಿಯ ತತ್ತ್ವ, ಸತ್ತ್ವ, ರಜಸ್ಸು, ತಮಸ್ಸು, ಎಂಬ ತ್ರಿಗುಣಮಾನಿನಿಯಾದ ಮೂಲ ಪ್ರಕೃತಿ ಈ ಜಗತ್ತಿನ ಮೂಲ. ಆಕೆಯೆ ವಿಷ್ಣು ಪತ್ನಿಯಾದ ಶ್ರೀತತ್ತ್ವ, ಆಕೆಯನ್ನೆ ಶಾಸ್ತ್ರಗಳು ವೈಷ್ಣವೀ ಮಾಯೆ ಎಂದು

ಕರೆಯುತ್ತವೆ. ಈ ತ್ರಿಗುಣಾತ್ಮಕ ಮಾಯೆ ಸದಾ ಭಗವದಧೀನವಾಗಿ ವಿಶ್ವವ್ಯಾಪಾರವನ್ನು ನಡೆಸುತ್ತದೆ. ಭಗವಂತ ಇದರಿಂದ ಅತೀತನಾಗಿದ್ದಾನೆ. ಅವನಿಗೆ ಪ್ರಕೃತಿ ಬಂಧನದ ಹುಟ್ಟುಸಾವುಗಳಿಲ್ಲ. ಎಲ್ಲ ಪ್ರಾಣಿಗಳಿಗೂ ಅವನು ಒಡೆಯ – ಸ್ವಾಮಿ. ಅವನು ಪರಿಶುದ್ಧ, ಜ್ಞಾನಮೂರ್ತಿ. ಬಂಧನದ ಸ್ಪರ್ಶವಿಲ್ಲದ ನಿತ್ಯ ಮುಕ್ತ ಸ್ವರೂಪ. ಆದರೂ ಮಾಯೆಯಿಂದ, ತನ್ನ ಅಧೀನವಾದ ಪ್ರಕೃತಿಯ ಸಹಯೋಗದಿಂದ, ಲೀಲೆಯಿಂದ ಲೋಕಾನುಗ್ರಹಕ್ಕಾಗಿ ಹುಟ್ಟಿ ಬಂದಂತೆ ಕಾಣಿಸಿಕೊಳ್ಳುತ್ತಾನೆ.

ತನ್ನ ಪ್ರಯೋಜನಕ್ಕಾಗಿಯಲ್ಲ; ಲೋಕದ ಜನರ ಮೇಲಣ ಅನುಕಂಪೆಯಿಂದ, ಅನುಗ್ರಹ ದೃಷ್ಟಿಯಿಂದ ವೈದಿಕವಾದ ಪ್ರವೃತ್ತಿ– ನಿವೃತ್ತಿ ಧರ್ಮಗಳನ್ನು ದುಃಖದ ಮೋಹದ ಮಡುವಿನಲ್ಲಿ ಮುಳುಗಿದ ಅರ್ಜುನನಿಗೆ ಉಪದೇಶಿಸಿದ. ಗುಣವಂತರಿಗೆ ಹೇಳಿದರೆ ಅಂಥವರು ತಿಳಿದು ಅನುಷ್ಠಾನಕ್ಕೆ ತಂದರೆ ಅಂಥ ಧರ್ಮ ಲೋಕದಲ್ಲಿ ಬೇಗನೆ ಪ್ರಚುರಗೊಳ್ಳುತ್ತದೆ. ಎನ್ನುವುದಕ್ಕಾಗಿ ಭಗವಂತ ಅರ್ಜುನನಂಥ ಉತ್ತಮಾಧಿಕಾರಿಯನ್ನು ಉಪದೇಶಕ್ಕೆ ಮಾಧ್ಯಮವಾಗಿ ಆಯ್ದುಕೊಂಡ.

ಹೀಗೆ ಕೃಷ್ಣನಿಂದ ಉಪದಿಷ್ಟವಾದ ಧರ್ಮರಹಸ್ಯವನ್ನು ಸರ್ವಜ್ಞರಾದ ಭಗವಾನ್ ವೇದವ್ಯಾಸರು ಇದ್ದಕಿದ್ದಂತೆ 700 ಪದ್ಯಗಳಲ್ಲಿ ರಚಿಸಿ ನಮಗಿತ್ತರು.

ಹೀಗೆ ಗೀತಾಶಾಸ್ತ್ರ ಸಮಸ್ತವೇದಗಳ ಸಾರ ಸಂಗ್ರಹ. ಸುಲಭದಲ್ಲಿ ಅರಗಿಸಿಕೊಳ್ಳಲಾಗದ ಮಹಾರ್ಥಗಳ ಗಣಿ, ಆದರಿಂದಲೆ ಹಲವು ಮಂದಿ ಅದರ ಅರ್ಥವಿವರಣೆಗೆ ಪ್ರಯತ್ನಿಸಿದ್ದಾರೆ. ಒಬ್ಬರಿಗೆ ಒಬ್ಬರು ವಿರುದ್ಧವಾಗಿ ಹತ್ತಾರು ಬಗೆಯ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಎಲ್ಲರೂ ಕೃಷ್ಣನ ಭಾವವನ್ನು ಗ್ರಹಿಸುವಲ್ಲಿ ಸೋತಿದ್ದಾರೆ. ಸಾಮಾನ್ಯ ಜನ ಈ ವ್ಯಾಖ್ಯಾನಗಳ ಪರಸ್ಪರ ವಿರುದ್ಧ ವಿವರಣೆಗಳಿಂದ ಗೊಂದಲಗೆಟ್ಟಿದ್ದಾರೆ. ಇದನ್ನು ಗಮನಿಸಿ ವಿವೇಚನೆಯಿಂದ ಈ ಗ್ರಂಥದ ಮೂಲಭಾವವನ್ನು ವಿವರಿಸಲು ನಾವು ಸಂಕ್ಷಿಪ್ತವಾದ ವ್ಯಾಖ್ಯಾನವನ್ನು ಬರೆದಿದ್ದೇವೆ.

ಸಂಕ್ಷೇಪವಾಗಿ ಈ ಗೀತಾಶಾಸ್ತ್ರದ ಪ್ರಯೋಜನ ಈ ಸಂಸಾರ ಬಂಧನದಿಂದ ಪಾರಾಗಿ ಪರಮಶ್ರೇಯಸ್ಸಾದ ಮುಕ್ತಿಯನ್ನು ಪಡೆಯುವುದು. ಅಂಥ ಮೋಕ್ಷ ಸರ್ವಕರ್ಮ ಸನ್ಯಾಸ ಪೂರ್ವಕವಾದ ಆತ್ಮಜ್ಞಾನ ನಿಷ್ಠೆಯಿಂದ ಮಾತ್ರವೆ ಸಾಧ್ಯ. ಈ ಗೀತಾಧರ್ಮವನ್ನು ಕುರಿತು ಭಗವಂತನೆ ಅನು ಗೀತೆಯಲ್ಲಿ ಹೀಗೆ ಹೇಳಿದ್ದಾನೆ: ''ಸ ಹಿ ಧರ್ಮಃ ಸುಪರ್ಯಾಪ್ತೋ ಬ್ರಹ್ಮಣಃ ಪದವೇದನಮ್'' (ಭಗವಂತನ ನಿಚ್ಚಳ ಅರಿವೆ ಧರ್ಮಗಳಲ್ಲಿ ಹಿರಿಯ ಧರ್ಮ).

ಇನ್ನೂ ಒಂದು ಮಾತು ಅಲ್ಲಿ ಬಂದಿದೆ. ''ನೈವ ಧರ್ಮೀ ನ ಚಾಧರ್ಮೀ ನಚೈವ ಹಿ ಶುಭಾಶುಭೀ । ಯಃ ಸ್ಯಾದೇಕಾಸನೇ ಲೀನಃ ತೂಷ್ಣೀಂ ಕಿಂಚಿದಚಿಂತಯನ್'' (ಯಾರು ಯಾವ ಕ್ರಿಯೆಯಲ್ಲು ತನ್ನನ್ನು ತೊಡಗಿಸಿಕೊಳ್ಳದೆ, ಯಾವುದನ್ನೂ ಮನಸ್ಸಿನಲ್ಲಿ ತುಂಬಿಸಿಕೊಳ್ಳದೆ, ಭಗವಂತನಲ್ಲೆ ಮನಸ್ಸನ್ನು ನೆಲೆಗೊಳಿಸುತ್ತಾನೊ ಅಂಥವನಿಗೆ ಧರ್ಮಾಧರ್ಮಗಳ, ಒಳಿತು – ಕೆಡುಕುಗಳ ಲೇಪವಿಲ್ಲ. ಅವನು ಎಲ್ಲವನ್ನು ಮೀರಿ

ನಿಂತ ಅತೀತನು). ''ಜ್ಞಾನಂ ಸನ್ಯಾಸ ಲಕ್ಷಣಂ'' (ಸರ್ವ ಕರ್ಮ ತ್ಯಾಗವೆ ನಿಜವಾದ ಜ್ಞಾನದ ದಾರಿ) ಎನ್ನುವುದೂ ಅಲ್ಲಿಯದೆ ಇನ್ನೊಂದು ಮಾತು.

ಗೀತೆಯಲ್ಲು ಕೊನೆಯಲ್ಲಿ ಅರ್ಜುನನಿಗೆ ಕೃಷ್ಣ ಹೇಳಿದ್ದು ಹೀಗೆಯೆ: ''ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ" (ಎಲ್ಲ ಪ್ರವೃತ್ತಿ ಧರ್ಮಗಳನ್ನೂ ತೊರೆದು ನನ್ನೊಬ್ಬನಲ್ಲೆ ಶರಣಾಗು.

ಐಹಿಕ ಅಭ್ಯುದಯಕ್ಕೆ ಕಾರಣವಾದ ಪ್ರವೃತ್ತಿ ಮಾರ್ಗದ ಧರ್ಮಾಚರಣೆ ವರ್ಣಾಶ್ರಮಗಳಿಗೆ ವಿಹಿತವಾಗಿದ್ದು ಅಂಥ ಧರ್ಮ ಸ್ವರ್ಗಾದಿಪ್ರಾಪ್ತಿಗೆ ಮಾತ್ರವೆ ಕಾರಣವಾದರೂ ಭಗವದರ್ಪಣ ಬುದ್ಧಿಯಿಂದ ಫಲಾಪೇಕ್ಷೆಯಿಲ್ಲದೆ ನಿಷ್ಕಾಮವಾಗಿ ಆಚರಿಸಿದಾಗ ಮನಃಶುದ್ಧಿಗೆ, ಸತ್ವಗುಣವೃದ್ಧಿಗೆ ಕಾರಣವಾಗುತ್ತದೆ. ಸಾತ್ವಿಕವಾದ ಮನಸ್ಸಿನಲ್ಲಿ ಜ್ಞಾನ ನಿಷ್ಠೆಯ ಯೋಗ್ಯತೆ ಪ್ರಾಪ್ತವಾಗುತ್ತದೆ. ಅದರಿಂದ ಕರ್ಮಾಚರಣೆ ಕೂಡ ಅಂತತಃ ಜ್ಞಾನಮಾರ್ಗಕ್ಕೆ ಪೋಷಕವೆ ಆಗುತ್ತದೆ ಮತ್ತು ಆ ಮೂಲಕ ಮೋಕ್ಷಕ್ಕೆ ನೆರವಾಗುತ್ತದೆ. ಈ ಅಭಿಪ್ರಾಯವನ್ನೆ ಮನಸ್ಸಿನಲ್ಲಿಟ್ಟು ಶ್ರೀಕೃಷ್ಣ ಮುಂದೆ ಹೀಗೆ ಹೇಳುತ್ತಾನೆ. "ಬ್ರಹ್ಮಣ್ಯಾಧಾಯ ಕರ್ಮಾಣಿ ಯತಚಿತ್ತಾ ಜಿತೇಂದ್ರಿಯಾಃ । ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾಽಽತ್ಮ ಶುದ್ಧಯೇ "॥ (ಜ್ಞಾನ ಯೋಗಿಗಳು ಕೂಡ ಎಲ್ಲ ಕರ್ಮವನ್ನು ಭಗವಂತನಲ್ಲಿ ಅರ್ಪಿಸುವ ಮೂಲಕ ಇಂದ್ರಿಯ ಮನಸ್ಸುಗಳನ್ನು ನಿಗ್ರಹಿಸಿ, ಕರ್ಮಫಲದ ಆಸೆಯನ್ನಿಡದೆ ಮನಃ ಶುದ್ಧಿಗಾಗಿ ಕರ್ಮವನ್ನಾಚರಿಸುತ್ತಾರೆ).

ಹೀಗೆ ಮನುಷ್ಯನ ಶ್ರೇಯಸ್ಸಿಗೆ ಕಾರಣವಾದ ಪ್ರವೃತ್ತಿ ನಿವೃತ್ತಿ ಧರ್ಮಗಳನ್ನೂ ಜತೆಗೆ ಪರತತ್ವ ವಾಸುದೇವಕೃಷ್ಣನೆಂಬ ಪರಬ್ರಹ್ಮ ಸ್ವರೂಪವನ್ನೂ ವಿಶೇಷವಾಗಿ ಬೆಳಕಿಗೆ ತರುವ ಈ ಗೀತೆ ವಿಶಿಷ್ಟವಾದ ವಿಷಯವನ್ನು ವಿಶಿಷ್ಟವಾದ ಪ್ರಯೋಜನಕ್ಕಾಗಿ ನಿರೂಪಿಸುವಂಥದು. ಅದರಿಂದಲೆ ಅದರ ಅರ್ಥವನ್ನು ತಿಳಿದಾಗ ಸಮಸ್ತ ಪುರುಷಾರ್ಥಗಳೂ ಅಂಗೈಯ ನೆಲ್ಲಿಯಂತೆ ಕರಗತ. ಅದಕ್ಕಾಗಿ ಅದರ ವಿವರಣೆಗಾಗಿ ಈ ಪ್ರಯತ್ನ.

ಶಂಕರಾಚಾರ್ಯರ ಉಪೋದ್ಘಾತಭಾಷ್ಯದ ಸಾರಾಂಶ ಇಷ್ಟು. ಇನ್ನು ಮುಂದಿನ ಲೇಖಾಂಕಗಳಲ್ಲಿ ಆಚಾರ್ಯ ರಾಮಾನುಜರ ಮತ್ತು ಆಚಾರ್ಯ ಮಧ್ವರ ಉಪೋದ್ಘಾತದ ಹಿನ್ನಲೆಯನ್ನು ಪರಿಶೀಲಿಸೋಣ.

# ಭಗವದ್‌ಗೀತೆ

– ಬನ್ನಂಜೆ ಗೋವಿಂದಾಚಾರ್ಯ

## ಆಚಾರ್ಯ ರಾಮಾನುಜರ ಗೀತೆಯ ಪ್ರಸ್ತಾವನೆ

ಆಚಾರ್ಯ ಶಂಕರರ ಗೀತಾ ಪ್ರಸ್ತಾವನೆಯನ್ನು ಕಳೆದ ಸಂಚಿಕೆಯಲ್ಲಿ ಸಂಗ್ರಹಿಸಿದ್ದಾಯಿತು. ಆಚಾರ್ಯ ರಾಮಾನುಜರ ಭಾವುಕತೆಯ ಪ್ರಸ್ತಾವನೆಯ ಸಾರಾಂಶವನ್ನು ಈಗ ಪರಿಶೀಲಿಸೋಣ.....

ಲಕ್ಷ್ಮೀಪತಿಯಾದ ನಾರಾಯಣನು ಎಲ್ಲ ದೋಷಗಳಿಂದ ದೂರನು; ಎಲ್ಲ ಸದ್ಗುಣಗಳ ಸೆಲೆ. ಭಗವಂತನಿಂದ ಬೇರಾದ ಎಲ್ಲ ವಸ್ತುಗಳಿಂದ ಆತನ ಸ್ವರೂಪ ವಿಲಕ್ಷಣವಾದದು; ಜ್ಞಾನಾನಂದಮಯವಾದದ್ದು. ಸಹಜವಾದ ಎಲ್ಲೆಯಿಲ್ಲದ, ಮಿಗಿಲಾದ ಜ್ಞಾನ, ಬಲ, ಐಶ್ವರ್ಯ, ವೀರ್ಯ, ಶಕ್ತಿ, ತೇಜಸ್ಸು, ಮುಂತಾದ ಸದ್ಗುಣಗಳ ಗಡಣವೆ ತುಂಬಿದ ಕಡಲು ಅವನು. ಅವನೆ ಮೆಚ್ಚಿದ, ಅವನಿಗೆ ಒಪ್ಪಾದ ಅನಂತಗುಣಗಳೆ ಅವನ ದಿವ್ಯ ರೂಪ, ಎಲ್ಲ ರೂಪಗಳಲ್ಲೂ ಅವನು ಏಕರೂಪ, ಅವನ ಗುಣಗಳು ನಮ್ಮ ಚಿಂತನೆಗೆ ಮೀರಿದ ದಿವ್ಯಾದ್ಭುತಗಳು; ನಾಶವಿಲ್ಲದ, ದೋಷವಿಲ್ಲದ, ಮಿಗಿಲಾದಂಥವು. ಉಜ್ಜ್ವಲತೆ, ಸೌಂದರ್ಯ, ಸೌಗಂಧ್ಯ, ಸೌಕುಮಾರ್ಯ, ಲಾವಣ್ಯ, ಚಿರ ಯೌವನ - ಒಂದೆ ಎರಡೆ? ಅವನ ಚೆಲುವಿಗೆ ಸೀಮೆಯೂ ಇಲ್ಲ; ಎಣೆಯೂ ಇಲ್ಲ. ಅವನ ರೂಪದ ಚೆಲುವಿಗೆ ತಕ್ಕಂತೆ ಬಗೆಬಗೆಯ ಆಭರಣಗಳು, ಅವೂ ವೈಚಿತ್ರಮಯ; ಎಣೆಯಿರದ ಅಚ್ಚರಿಯ ಸೆಲೆ; ನಾಶವಿರದವು; ದೋಷವಿರದವು; ಎಣಿಕೆಗೆ ಸಿಗದಂಥವು. ಅದಕ್ಕೆ ತಕ್ಕಂತೆ ಅಸಂಖ್ಯಾತ ದಿವ್ಯಾಯುಧಗಳು. ಅವುಗಳ ಶಕ್ತಿ ಊಹೆಗೆ ಎಟಕದು. ಅವು ಎಂದೂ ಹುಸಿಯಾದದ್ದಿಲ್ಲ. ಅವು ಸಾಟಿಯಿರದ ಮಂಗಲಮಯ ಆಯುಧಗಳು.

ಅವನ ಅರ್ಧಾಂಗಿಯಾದ ಶ್ರೀದೇವಿಯೂ ಇಂಥದೆ ಸದ್ಗುಣಗಳ ಸೆಲೆ. ತನಗೆ ಮೆಚ್ಚಾದ, ಒಪ್ಪಾದ, ಎಂದೆಂದೂ ದೋಷಗಳ ಸುಳಿವಿರದ, ರೂಪ, ಗುಣದ ಗರಿಮೆ, ಸಿರಿವಂತಿಕೆ, ಶೀಲವಂತಿಕೆ ಮುಂತಾದ ಎಣೆಯಿರದ, ಎಣಿಕೆಗೆ ಬರದ ಮಂಗಳ ಗುಣಗಳ ತವರಲ್ಲವೆ ಆ ಮಂಗಲದೇವತೆ.

ಈ ನಾರಾಯಣ ಪರಬ್ರಹ್ಮ ಸ್ವರೂಪ. ಪರಮ ಪುರುಷೋತ್ತಮತತ್ತ್ವ ಚತುರ್ಮುಖನಿಂದ ಹಿಡಿದು ಜಡ ಪ್ರಪಂಚದ ತನಕ ಎಲ್ಲವೂ ಅವನ ಸೃಷ್ಟಿ. ತನ್ನ ನಿಜರೂಪದಲ್ಲಿ ನೆಲೆನಿಂತ ಅವನನ್ನು ಮನುಷ್ಯರಾಗಲೀ, ಬ್ರಹ್ಮಾದಿ ದೇವತೆಗಳೆ ಆಗಲಿ ಪೂರ್ಣರೂಪದಿಂದ ತಿಳಿಯಲಾರರು. ಅವರ ಧ್ಯಾನ, ಆರಾಧನಾದಿಗಳಿಂದಲು ಅವನು ವ್ಯಕ್ತನಾಗಲಾರ. ಆದರೂ ಅವನು ಕರುಣೆ, ಸೌಶೀಲ್ಯ, ಔದಾರ್ಯ, ವಾತ್ಸಲ್ಯಗಳ ಅಪರಂಪಾರವಾದ ಕಡಲು. ಅದಕೆಂದೆ ಅವನು ತನ್ನ ಸಹಜ ಸ್ವಭಾವವನ್ನು ಕಳೆದುಕೊಳ್ಳದೆ ಬೇರೆಬೇರೆ ಅಧಿಷ್ಠಾನಗಳಲ್ಲಿ ಅದಕ್ಕೆ ತಕ್ಕಂತೆ ಅವತರಿಸಿ ಆಯಾ ಭಕ್ತರಿಂದ ಆರಾಧನೆಗೊಂಡು ಅವರ ಇಷ್ಟಾರ್ಥವನ್ನು ಪೂರೈಸುತ್ತ ಧರ್ಮ - ಅರ್ಥ -

ಕಾಮ - ಮೋಕ್ಷಗಳನ್ನು ಕರುಣಿಸಿರುತ್ತಿರುತ್ತಾನೆ.

ಭೂಭಾರಹರಣದ ನೆಪದಿಂದ ನಮಗೂ ಆಸರೆಯಾಗಿ ಭೂಮಿಯಲ್ಲಿ ಅವತರಿಸಿದ; ಎಲ್ಲರ ಕಣ್ಣಿಗೂ ಗೋಚರನಾಗಿ ಈ ಮಣ್ಣಿನಲ್ಲಿ ನಡೆದಾಡಿದ. ದೊಡ್ಡವರಿಗೆ, ಜ್ಞಾನಿಗಳಿಗೆ ಮಾತ್ರವಲ್ಲ, ಸಾಮಾನ್ಯ ಜನರಿಗೆ ಕೂಡ ಕಣ್‌ಮನಗಳನ್ನು ತಣಿಸುವ ದಿವ್ಯ ಲೀಲೆಗಳನ್ನು ಆಡಿತೋರಿಸಿದ, ಪೂತನೆ, ಶಕಟಾಸುರ, ಯಮಳಾರ್ಜುನರು, ಅರಿಷ್ಟ, ಪ್ರಲಂಬ, ಧೇನುಕ, ಕಾಳಿಯ, ಕೇಶಿ, ಕುವಲಯಾಪೀಡ, ಚಾಣೂರ. ಮುಷ್ಟಿಕ, ತೋಸಲ, ಕಂಸ ಮುಂತಾದವರನ್ನು ನಿಗ್ರಹಿಸಿದ. ಎಣೆಯಿರದ ಕಾರುಣ್ಯ, ಪ್ರೀತಿ, ಅನುರಾಗ ತುಂಬಿದ ಕುಡಿನೋಟದಿಂದ, ನುಡಿಜೇನಿನಿಂದ ಜಗತ್ತನ್ನು ತಣಿಸಿದ. ಅನುಪಮವಾದ ತನ್ನ ಸೌಂದರ್ಯ, ಸೌಶೀಲ್ಯಾದಿ ಗುಣಗಳನ್ನು ಪ್ರಕಟಗೊಳಿಸಿ ಅಕ್ರೂರ - ಮಾಲಾಕಾರ ಮೊದಲಾದವರನ್ನು ಪರಮ ಭಗವದ್ ಭಕ್ತರನ್ನಾಗಿ ರೂಪಿಸಿದ. ಅಂತೆಯೆ ಕೌರವ - ಪಾಂಡವ ಯುದ್ಧದ ಮುಂಚೂಣಿಯಲ್ಲಿ ನಿಂತು ಪ್ರೋತ್ಸಾಹಿಸಿದ. ಈ ಯುದ್ಧದ ನೆಪದಿಂದ ಮೋಕ್ಷಸಾಧನವಾದ, ವೇದಾಂತಗಳ ಸಾರವಾದ, ಭಗವದ್ವಿಷಯಕ ಜ್ಞಾನ - ಕರ್ಮ ಸಹಿತವಾದ ಭಕ್ತಿಯೋಗದ ಸಂದೇಶವನ್ನು ಬೆಳಕಿಗೆ ತಂದ.

ಪಾಂಡವರಿಗೂ ಕೌರವರಿಗೂ ಯುದ್ಧ ಪ್ರಾರಂಭವಾಗಿದೆ. ಪಾರ್ಥ ರಥಿಕನಾದ, ಎಲ್ಲ ಜಗತ್ತು ಕಣ್ಣಿಟ್ಟು ಕಾಣುವಂತೆ ತಾನು ಸಾರಥಿಯಾಗಿ ನಿಂತ, ಒಡೆಯರಿಗು ಒಡೆಯನಾದ ಭಗವಾನ್ ಪುರುಷೋತ್ತಮನ ಲೀಲೆಯಿದು. ಜಗತ್ತಿನ ಉಪಕಾರಕ್ಕಾಗಿ ಮಾನವನಾಗಿ ಕಾಣಿಸಿಕೊಂಡು ಅವನಾಡಿದ ನಾಟಕವಿದು. ಇದು ಭಗವಂತನ ಭಕ್ತಪರಾಧೀನತೆಗೆ ಒಂದು ಸಾಕ್ಷಿ.

ಧೃತರಾಷ್ಟ್ರನಿಗು ಇದೆಲ್ಲ ತಿಳಿಯದ ಸಂಗತಿಯಲ್ಲ. ಆದರೂ ಅವನು ಮಕ್ಕಳ ಮೋಹದಿಂದ ಹೊರಗಿನಂತೆ ಒಳಗೂ ಪೂರ್ತಿ ಕುರುಡನಾಗಿ ಬಿಟ್ಟಿದ್ದ. ತನ್ನ ಮಗ ದುರ್ಯೋಧನನ ವಿಜಯದ ಸುದ್ದಿಯನ್ನು ಕೇಳುವ ಹುಚ್ಚು ಆಸೆಯಿಂದ ಸಂಜಯನೊಡನೆ ಯುದ್ಧದ ವಿವರವನ್ನು ಹೇಳುವಂತೆ ಪ್ರಶ್ನಿಸಿದ.

...... ಇವಿಷ್ಟು ಮಾತುಗಳು ಸ್ಥೂಲವಾಗಿ ಗೀತೆಯ ಪ್ರಸ್ತಾವನೆಯಾಗಿ ರಾಮಾನುಜರ ಭಾಷ್ಯದಲ್ಲಿ ಬಂದಂಥವು. ಅವರ ಕೃಷ್ಣಭಕ್ತಿ ಮತ್ತು ಅನನ್ಯ ಶರಣಾಗತಿ ಭಾವ ಇಲ್ಲಿ ನಿಚ್ಚಳವಾಗಿ ಮೂಡಿಬಂದಿದೆ. ಆಚಾರ್ಯ ಮಧ್ವರ ಪ್ರಸ್ತಾವನೆಯನ್ನು ಮುಂದಿನ ಸಂಚಿಕೆಯಲ್ಲಿ ಪ್ರಸ್ತಾವಿಸೋಣ.

# ಗೀತೆಯ ಸಂದೇಶ

— ಬನ್ನಂಜೆ ಗೋವಿಂದಾಚಾರ್ಯ

## ಆಚಾರ್ಯ ಮಧ್ವರ ಗೀತಾಭಾಷ್ಯದ ಅವತರಣಿಕೆ

ದ್ವಾಪರದ ಅಂತ್ಯದಲ್ಲಿ ಜನತೆಯಲ್ಲಿ ಧರ್ಮದ ಅರಿವು ಮರೆಯಾಗತೊಡಗಿತು. ಯಾವುದು ಧರ್ಮ? ಯಾವುದು ಅಧರ್ಮ? ನಿರ್ಣಯ ತಿಳಿಯದೆ ಸಜ್ಜನರು ದಾರಿಗೆಟ್ಟರು. ಸಜ್ಜನರ ಮೇಲೆ ದೇವತೆಗಳು ಕರುಣೆಗೊಂಡರು. ಭೂಲೋಕದ ಅವ್ಯವಸ್ಥೆಗೆ ದೇವಲೋಕ ಮಾರ್ದನಿಗೊಟ್ಟಿತು. ಮತ್ತೆ ತಿಳಿವಿನ ಬಾಗಿಲು ತೆರೆದು ತೋರುವಂತೆ ಬ್ರಹ್ಮ, ರುದ್ರ, ಇಂದ್ರಾದಿ ದೇವತೆಗಳು ಭಗವಂತನಲ್ಲಿ ಮೊರೆಯಿಟ್ಟರು. ಭೂಮಿಯ ಆಪತ್ತಿಗೆ ಸ್ವರ್ಗದಿಂದ ಸತ್ಯಲೋಕದ ತನಕ ಎಲ್ಲ ಊರ್ಧ್ವಲೋಕಗಳೂ ನೆರವಿತ್ತವು. ದೇವತೆಗಳ ಮೊರೆಗೆ ಓಗೊಟ್ಟ ಭಗವಂತ ಜ್ಞಾನದ ದಾರಿತೋರಲು 'ವ್ಯಾಸಮುನಿ'ಯಾಗಿ ಭೂಮಿಗಿಳಿದು ಬಂದ.

ಅವತಾರದ ಉದ್ದೇಶವಾದ ವೇದ ವಿಭಾಗ ನಡೆಯಿತು. ಅಲ್ಲಿಗೆ ಜ್ಞಾನಕಾರ್ಯ ಮುಗಿಯಲಿಲ್ಲ. ಜನಕ್ಕೆ ವೇದದ ಅರ್ಥ ಕಬ್ಬಿಣದ ಕಡಲೆಯಾಯಿತು. ಕೆಲವರಿಗೆ ಅರ್ಥವಾಗದೆ ಹೋಯಿತು. ಕೆಲವರಿಗೆ ಅಪಾರ್ಥವಾಯಿತು. ಇದರಿಂದ ಮತ್ತೆ ಗೊಂದಲ: ಯಾವುದು ಸರಿ? ಯಾವುದು ತಪ್ಪು? ಯಾವುದು ಹಿತ? ಯಾವುದು ಅಹಿತ? ಹಿತವನ್ನು ಸಾಧಿಸುವ ಬಗೆ ಏನು? ಅಹಿತವನ್ನು ನಿವಾರಿಸುವ ಬಗೆ ಏನು? ಹೀಗೆ ಕೊನೆಗೂ ಸಾಧನೆಯ ದಾರಿ ಅಸ್ಪಷ್ಟವಾಗಿಯೆ ಉಳಿಯಿತು. ವೈದಿಕರೇ ಗೊಂದಲಕ್ಕೊಳಗಾದರು. ಬದುಕಿನ ಬಂಧನದಿಂದ ಬಿಡುಗಡೆಯ ದಾರಿ ತಿಳಿಯದೆ ಜನ ಸಂಕಟಕ್ಕೊಳಗಾದರು.

ವೇದವನ್ನು ಓದಲಾಗದೆ ಉಳಿದ ಇನ್ನೊಂದು ವರ್ಗವಂತೂ ತೀರ ಅಬೋಧವಾಗಿತ್ತು. ಸಂಸಾರದ, ಸಂತಾನದ ಹೊಣೆ ಹೊತ್ತ ಹೆಣ್ಮಕ್ಕಳು ಮತ್ತು ವೇದಾಧ್ಯಯನಕ್ಕೆ ಅವಶ್ಯವಾದ ಬೌದ್ಧಿಕ ಬೆಳವಣಿಗೆ–ಸಂಸ್ಕಾರಗಳಿಲ್ಲದ 'ಶೂದ್ರಸ್ವಭಾವ'ದ ಜನ ವೇದಕ್ಕೆ ಅನಧಿಕಾರಿಗಳಾಗಿ ಜ್ಞಾನದ ದಾರಿಯಲ್ಲಿ ಸಾಗಲಾರದೆ ಉಳಿದರು.

ವೇದದ ಅಧಿಕಾರವಿಲ್ಲದ ಜನ ವೇದ ಓದಲಿಲ್ಲ. ಅಧಿಕಾರವಿದ್ದವರು ಓದಿದರೂ ಅರ್ಥವಾಗಲಿಲ್ಲ. ಭಗವಂತನ ಹೃದಯ ಮತ್ತೆ ಕರುಣೆಯಿಂದ ಮಿಡಿಯಿತು. ವರ್ಣಭೇದ, ಲಿಂಗಭೇದವಿಲ್ಲದೆ ಎಲ್ಲ ಜನಕ್ಕು ಧರ್ಮದ ತಿರುಳು ತಿಳಿಯಬೇಕು; ಮೋಕ್ಷದ ದಾರಿ ತೆರೆಯಬೇಕು. ಅದಕೆಂದೆ ಭಗವಂತ ಸಮಸ್ತ ವೈದಿಕ ವಾಙ್ಮಯದ ಸಾರವನ್ನು ವಿವರಿಸಿ ತಿಳಿಹೇಳುವ 'ಮಹಾಭಾರತ'ವೆಂಬ ಬೃಹದ್‌ಗ್ರಂಥವನ್ನು ರಚಿಸಿದನು.

ಈ ಮಹಾಭಾರತವೆಂದರೆ ವೇದೋಪನಿಷತ್ತು ಪುರಾಣಗಳ ಸಾರಸರ್ವಸ್ವವಷ್ಟೆ ಅಲ್ಲ, ವೇದದಲ್ಲೂ ಹೇಳದ, ಭಗವಂತನ ಅಲೌಕಿಕ ಜ್ಞಾನಕ್ಕೆ ಮಾತ್ರ ಗೋಚರವಾದ ಅನೇಕ ಅಪೂರ್ವ ಸಂಗತಿಗಳೂ ಇದರಲ್ಲಿ ಅಡಗಿವೆ. ಇದರಲ್ಲಿ ಕೆಲವು ಅರ್ಥಗಳು

ಸಮಸ್ತ ಜೀವಜಾತಕ್ಕು ಎಟಕುವಂಥವು. ಕೆಲವು ಎಲ್ಲರಿಗು ಎಟುಕದಂಥವು. ಇದು ಮೇಲುನೋಟಕ್ಕೆ ಭರತವಂಶದ ರಾಜರ ಇತಿಹಾಸ; ಆಳಕ್ಕೆ ಇಳಿದಾಗ ಇಡಿಯ ಭಾರತ ಬರಿಯ ಭಗವಂತನ ಮಹಿಮೆಯ ಗುಣಗಾನ. ಕಾಣುವ ಅರ್ಥಕ್ಕಿಂತ ಆಚೆಗೆ ಕಾಣದ ಅರ್ಥದ ಕಡಲೇ ಇಲ್ಲಿ ಮಡುಗಟ್ಟಿದೆ.

ನಾರಾಯಣಾಷ್ಟಾಕ್ಷರ ಕಲ್ಪ ಎಂಬ ಗ್ರಂಥದಲ್ಲಿ ಈ ಸಂಗತಿಯೆಲ್ಲ ಬಂದಿದೆ. ಅದರ ಮಾತು ಹೀಗಿದೆ.

"ಜಗದ ಒಡೆಯರಾದ ಬ್ರಹ್ಮರುದ್ರಾದಿಗಳು ವೇದದ ಅರ್ಥ ತಿಳಿಯದೆ ಸಂಸಾರದಲ್ಲಿ ದಾರಿಗಾಣದೆ ಕಂಗಾಲರಾದ ಜನರನ್ನು, ವೇದಾಧ್ಯಯನದ ಅಧಿಕಾರವಿಲ್ಲದೆ ಜ್ಞಾನಶೂನ್ಯರಾದ ಹೆಣ್ಮಕ್ಕಳು ಮುಂತಾದವರನ್ನು ಕಂಡು ಕನಿಕರದಿಂದ ಪುರುಷೋತ್ತಮನಾದ ನಾರಾಯಣನನ್ನು ಪ್ರಾರ್ಥಿಸಿಕೊಂಡರು. ಅವರ ಪ್ರಾರ್ಥನೆಗೆ ಒಲಿದ ಭಗವಂತ ವ್ಯಾಸನಾಗಿ ಅವತರಿಸಿದ. ಹೀಗೆ ವ್ಯಾಸರೂಪದಿಂದ ಮತ್ತು ಇತರ ಅವತಾರರೂಪಗಳಿಂದ ಕೂಡ ಜ್ಞಾನದ ದಾರಿಯನ್ನು ತೆರೆದು ತೋರಿದ.

"ವೇದದ ಎಲ್ಲ ಅರ್ಥಗಳನ್ನು ಒಳಗೊಂಡ, ವೇದಗಳಲ್ಲೂ ಹೇಳದ ಭಗವಂತನ ಅಪ್ರಾಕೃತ ಪ್ರಜ್ಞೆಗೆ ಮಾತ್ರ ಗೋಚರವಾಗುವ ಅಪೂರ್ವಾರ್ಥಗಳನ್ನು ಒಳಗೊಂಡ, ಅವರಿಂದಲೆ ವೇದಕ್ಕಿಂತಲೂ ಮಿಗಿಲೆನ್ನಿಸಿದ ಮಹಾಭಾರತವನ್ನು ರಚಿಸಿದ, ಪಂಚರಾತ್ರವನ್ನು ರಚಿಸಿದ, ಮೂಲರಾಮಾಯಣವನ್ನು ರಚಿಸಿದ, ಭಗವತ್ಪರವಾದ ಭಾಗವತವೆ ಮುಂತಾದ ಪುರಾಣಗಳನ್ನು ರಚಿಸಿದ. ಈ ಎಲ್ಲ ಭಗವತ್ಕೃತಿಗಳು ಸಮಷ್ಟಿಯಾಗಿ 'ಐದನೆಯ ವೇದಗಳು' ಎಂದು ಪ್ರಸಿದ್ಧವಾಗಿವೆ."

"ಪೂರ್ತಿಯಾಗಿ ಭಾರತದ ಅರ್ಥವನ್ನು ಚತುರ್ಮುಖನೂ ತಿಳಿದಿಲ್ಲ. ಆದರೂ ಯಥಾಶಕ್ತಿ ಅದರ ಸವಿಯನ್ನು ಎಲ್ಲರೂ ಸವಿಯಬಲ್ಲರು. ಭಾರತ ಅನೇಕ ಅಪೂರ್ವ ಅರ್ಥಗಳ ಸೆಲೆ ಎಂದು ಬಲ್ಲವರು ಹೇಳುತ್ತಾರೆ"– ಇದು ಉಪನಾರದೀಯದ ಹೇಳಿಕೆ.

"ಬ್ರಹ್ಮಾದಿಗಳಿಂದ ಪ್ರಾರ್ಥಿತನಾದ ನಾರಾಯಣ ಭಾರತವನ್ನು ರಚಿಸಿದ. ಭಾರತದ ಒಂದೊಂದು ಮಾತಿಗೂ ಹತ್ತು ಅರ್ಥಗಳಿವೆ. ಅದನ್ನು ಎಲ್ಲರೂ ತಿಳಿಯುವುದು ಸಾಧ್ಯವಿಲ್ಲ"– ಇದು ನಾರದೀಯ ಪುರಾಣದಲ್ಲಿ ಬಂದ ಮಾತು.

ಸ್ಕಾಂದ ಪುರಾಣ ಮಹಾಭಾರತದ ಬಗೆಗೆ ಹೀಗೆ ಹೇಳುತ್ತದೆ:

"ಭಗವಂತ ಭಾರತವನ್ನು ರಚಿಸಿದ. ಸಂಖ್ಯೆಯಲ್ಲಿ ಐದನೆಯ ವೇದ. ಅರ್ಥದ ಸೆಲೆಯಲ್ಲಿ ವೇದಕ್ಕಿಂತಲೂ ಮಿಗಿಲು. ಇಡಿಯ ಭಾರತಕ್ಕೆ ಕನಿಷ್ಠ ಹತ್ತು ಬಗೆಯ ವಿವರಣೆಗಳಿವೆ. ಅಂತತಃ ಇದು ಕೇವಲ ವಿಷ್ಣು ಪಾರಮ್ಯವನ್ನು ಸಾರುವಂಥದು. ಎಲ್ಲೆಡೆಯು ಮೇಲುನೋಟಕ್ಕೆ ಕಾಣದ ಗೂಢಾರ್ಥಗಳೆ ತುಂಬಿವೆ. ಆದಕೆಂದೆ ಇದು ವೇದಗಳಿಗೂ ಮಿಗಿಲಾದ ವೇದ."

ಮಹಾಭಾರತದಲ್ಲೆ ಅಲ್ಲಿ ಇಲ್ಲಿ ಬರುವ ಮಾತುಗಳನ್ನು ಪರ್ಯಾಲೋಚಿಸಿದರೂ

ಈ ಸಂಗತಿ ಸ್ಫುಟವಾಗುತ್ತದೆ. ಭಾರತದಲ್ಲೆ ಬರುವ ಕೆಲವು ವಚನಗಳು ಹೀಗಿವೆ:

1) "ನಾಲ್ಕು ವೇದಗಳನ್ನು ಕಲಿತಿರಬಹುದು; ವೇದಾಂಗಗಳನ್ನು ಕಲಿತಿರಬಹುದು; ಉಪನಿಷತ್ತುಗಳನ್ನೂ ಕಲಿತಿರಬಹುದು. ಆದರೆ ಅವುಗಳಿಗೆ ಪೋಷಕವಾದ ಮಹಾಭಾರತದಂಥ ಪುರಾತನ ಇತಿಹಾಸಗ್ರಂಥಗಳನ್ನು ಅರಿಯದಿದ್ದವನು ನಿಜವಾದ ಪಂಡಿತನಾಗಲಾರ. ಅವನು ವೇದೋಪನಿಷತ್ತುಗಳ ಅರ್ಥವನ್ನು ಸರಿಯಾಗಿ ಗ್ರಹಿಸಲಾರ."

2) "ಇತಿಹಾಸ ಮತ್ತು ಪುರಾಣ ಗ್ರಂಥಗಳ ನೆರವಿನಿಂದ ವೇದದ ಅರ್ಥವನ್ನು ನಿರ್ಧರಿಸಬೇಕು. ಅರೆಪಂಡಿತರ ಕೈಯಲ್ಲಿ ಸಿಕ್ಕಿಕೊಂಡ ವೇದ 'ಈತ ನನ್ನನ್ನು ಹೊಲೆಗೆಡಿಸುತ್ತಾನೆ' ಎಂದು ಗಾಬರಿಗೊಳ್ಳುತ್ತದೆ. ಅಂಥವರ ಮುಂದೆ ಅದು ತನ್ನ ಅರ್ಥವನ್ನು ತೆರೆಯದೆ ಮುಚ್ಚಿಕೊಳ್ಳುತ್ತದೆ."

3) "ಕೆಲವರ ಅಭಿಪ್ರಾಯದಂತೆ ಭಾರತ ಆಸ್ತೀಕಾದಿ: ಆಸ್ತಿಕರಾದ ಪಾಂಡವರನ್ನು ಕುರಿತು ಬರೆದ ಐತಿಹಾಸಿಕ ಗ್ರಂಥ. ಇದು ಅಧಿಭೂತದ ಅರ್ಥ. ಇನ್ನು ಕೆಲವರ ಪ್ರಕಾರ ಮನ್ವಾದಿ: ಪಂಚ ಪಾಂಡವರು, ದ್ರೌಪದಿ ಮತ್ತು ಕೃಷ್ಣ ಇವರು ಪ್ರತಿನಿಧಿಸುವ ಮೌಲ್ಯಗಳನ್ನು ಬಿತ್ತರಿಸುವ ಅಧ್ಯಾತ್ಮ ಗ್ರಂಥ. (ಯುಧಿಷ್ಠಿರ = ಧರ್ಮ; ಭೀಮ = ಭಕ್ತಿ, ಜ್ಞಾನ, ವೈರಾಗ್ಯ, ಪ್ರಜ್ಞಾ, ಮೇಧಾ, ಧೃತಿ, ಸ್ಥಿತಿ, ಯೋಗ, ಪ್ರಾಣ, ಬಲ; ಅರ್ಜುನ = ಶ್ರವಣ, ಮನನ, ಧ್ಯಾನ; ನಕುಲ-ಸಹದೇವ = ಶೀಲ-ವಿನಯ; ದ್ರೌಪದಿ = ವೇದ ವಿದ್ಯೆ; ಕೃಷ್ಣ = ವೇದವೇದ್ಯ.) ಇನ್ನು ಕೆಲವರು ವಿಷ್ಣು ಸಹಸ್ರನಾಮದಂತೆ ಇಡಿಯ ಭಾರತವೂ ಭಗವಂತನ ನಾಮ, ಅವನ ಗುಣಗಳ ಬಿತ್ತರ ಎನ್ನುತ್ತಾರೆ. ಇದು ಭಾರತದ ಅಧಿದೈವ ಮತ್ತು ಅಧಿಯಜ್ಞ ಮುಖ."

4) "ಮಹಾಭಾರತ ಮಹತ್ತಾದ ಕೃತಿ; ಅರ್ಥಭಾರದಿಂದ ತುಂಬಿದ ಕೃತಿ, ಅದಕೆಂದೆ ಅದು 'ಮಹಾಭಾರತ'. ಈ ನಾಮದ ನಿರ್ವಚನವನ್ನು ತಿಳಿದವನು ಕೂಡ ಎಲ್ಲ ಪಾಪಗಳಿಂದ ಮುಕ್ತನಾಗುತ್ತಾನೆ."

5) "ಇಲ್ಲಿ ಏನಿದೆಯೋ ಅದನ್ನಷ್ಟೆ ಇತರ ಗ್ರಂಥಗಳಲ್ಲೂ ಕಾಣಬಹುದು. ಇಲ್ಲಿ ಇಲ್ಲದ್ದು ಇನ್ನೆಲ್ಲೂ ಇಲ್ಲ."

6) "ಮಹಾಭಾರತವೆಂಬ ಕಲ್ಪವೃಕ್ಷಕ್ಕೆ ವಿರಾಟಪರ್ವ ಮತ್ತು ಉದ್ಯೋಗ ಪರ್ವಗಳು ಸಾರಭೂತವಾದ ತಿರುಳು."

ವೈಶಂಪಾಯನಾದಿ ಋಷಿಗಳು ಅತ್ಯುನ್ನತ ಗೌರವದಿಂದ ಈ ಗ್ರಂಥವನ್ನು ಅಧ್ಯಯನ ಪರಂಪರೆಯಿಂದ ಉಳಿಸಿ ಬೆಳೆಸಿಕೊಂಡು ಬಂದ ಸಂಪ್ರದಾಯವೂ ಇಲ್ಲಿ ಗಮನಾರ್ಹ.

"ಭಗವಾನ್ ನಾರಾಯಣನಲ್ಲದೆ ಇನ್ನಾರು ಮಹಾಭಾರತವನ್ನು ರಚಿಸುವುದು ಸಾಧ್ಯ?" –ಇಂಥ ಒಂದು ಮಾತು ಪುರಾಣಾಂತರದಲ್ಲಿ ಬಂದಿದೆ. ಈ ಮಾತು ಮಹಾಭಾರತದ ಹಿರಿಮೆಯನ್ನಲ್ಲದೆ ಇನ್ನೇನನ್ನು ಹೇಳುವುದು ಸಾಧ್ಯ?

ನಾರದನಂಥ ದೇವರ್ಷಿಗಳು ಕೂಡ ಈ ಗ್ರಂಥವನ್ನು ಅಧ್ಯಯನ ಮಾಡಿದ, ಅಧ್ಯಾಪನ ಮಾಡಿದ ಉಲ್ಲೇಖಗಳು ಕೂಡ ಈ ಗ್ರಂಥ ದೇವಮಾನ್ಯ ಎಂಬ ಮಾತನ್ನೆ ಸಮರ್ಥಿಸುತ್ತವೆ.

ಹೀಗೆ ಭಾರತದ ಹಿರಿಮೆ ಅಸಾಧಾರಣವಾದದ್ದು. ಇಲ್ಲವಾದರೆ ಭಾರತದ ನಾಮದ ನಿರ್ವಚನವನ್ನು ತಿಳಿದ ಮಾತ್ರಕ್ಕೆಯೆ ಎಲ್ಲ ಪಾಪಗಳು ದೂರವಾಗುವುದೆಂದರೇನು? ಇದು ಬರಿಯ ಹೊಗಳಿಕೆಯ ಮಾತಲ್ಲ. ಜ್ಞಾನಿಗಳೆಲ್ಲ ಒಪ್ಪಿದ, ಪ್ರಸಿದ್ಧವಾದ ಮಾತು.

ಭಾರತದಲ್ಲಿ ಅಂಥ ಹಿರಿಮೆ ಇರದಿದ್ದರೆ-'ನಾರಾಯಣನಲ್ಲದೆ ಇತರರು ಅದನ್ನು ರಚಿಸುವುದು ಅಸಾಧ್ಯ' ಎಂಬ ಮಾತಾದರೂ ಏಕೆ ಬರುತ್ತಿತ್ತು? ಇದು ಗ್ರಂಥಾಂತರದಲ್ಲಿ ಬಂದ ಮಾತಾದ್ದರಿಂದ - ಸುಳ್ಳೇ ಹೊಗಳಿಕೆಯ ಮಾತು ಎನ್ನುವಂತಿಲ್ಲ. ಇದು ಗ್ರಂಥಕಾರರ ಸ್ತುತಿ ಎಂದರೂ ಗ್ರಂಥದ ಹಿರಿಮೆಯ ಮೂಲಕವೆ ಗ್ರಂಥಕಾರರ ಹಿರಿಮೆಯನ್ನು ಸಾರುವ ಈ ಪದ್ಯಕ್ಕೆ ಇನ್ನಾವ ರೀತಿಯಿಂದಲು ಅರ್ಥ ಹಚ್ಚುವುದು ಸಾಧ್ಯವಿಲ್ಲ. ಇಲ್ಲವಾದರೆ ವ್ಯಾಸರೆ ರಚಿಸಿದ ಪುರಾಣಗಳನ್ನೆಲ್ಲ ಕೈಬಿಟ್ಟು ಮಹಾಭಾರತವನ್ನೆ ಈ ಪುರಾಣ ಶ್ಲೋಕ ಏಕೆ ಉಲ್ಲೇಖಿಸಬೇಕು. ಈ ಎಲ್ಲ ಕಾರಣಗಳಿಂದ ಮಹಾಭಾರತದ ಅಸಾಧಾರಣ ಹಿರಿಮೆ ಸ್ಫುಟವಾಗಿ ವೇದ್ಯವಾಗುತ್ತದೆ.

ಮಹಾಭಾರತದ ನಡುವೆ ನಿಬದ್ಧವಾದ ಗ್ರಂಥಭಾಗ ಭಗವದ್‌ಗೀತೆ. ಈ ಗೀತೆ ಭಾರತದ ಸಮಸ್ತ ಅರ್ಥಗಳ ಸಾರ ಸಂಗ್ರಹ. ವಾಸುದೇವ-ಅರ್ಜುನರ ಸಂವಾದ ರೂಪವಾದ ಈ ಕೃತಿ ಮಹಾಭಾರತವೆಂಬ ಪಾರಿಜಾತ ಕುಸುಮದ ಮಕರಂದರಸ.

ಮಹಾಪುರಾಣಗಳಲ್ಲಿ ಒಂದಾದ 'ಕೌರ್ಮ'ದಲ್ಲಿ ಕೂಡ ಈ ಮಾತು ಬಂದಿದೆ: "ಶಾಸ್ತ್ರಗಳೆಲ್ಲೆಲ್ಲ ಭಾರತ ಮಿಗಿಲಾದುದು. ಭಾರತದಲ್ಲೂ ಭಗವದ್‌ಗೀತೆ ಮತ್ತು ವಿಷ್ಣು ಸಹಸ್ರನಾಮ ಮಿಗಿಲಾದ ಗ್ರಂಥಗಳು. ಈ ಎರಡನ್ನು ತಿಳಿಯಬೇಕು; ತಿಳಿದು ಪಠಿಸಬೇಕು."

ಮಹಾಭಾರತವೆ ಮುಂದೆ ಕೃಷ್ಣನ ಬಾಯಿಂದಲೆ ಬಂದ ಇಂಥ ಮಾತುಗಳನ್ನು ಉಲ್ಲೇಖಿಸುತ್ತದೆ: "ಭಗವಂತನನ್ನು ತಿಳಿಯಹೊರಟ ಜಿಜ್ಞಾಸುಗಳ ಸಾಧನೆಯ ದಾರಿಯನ್ನು ಗೀತೆ ಸಮಗ್ರವಾಗಿ ತಿಳಿಸುತ್ತದೆ..." ಇತ್ಯಾದಿ.

ಲೇಖಾಂಕ: 6

# ಗೀತೆಯ ಸಂದೇಶ

— ಬನ್ನಂಜೆ ಗೋವಿಂದಾಚಾರ್ಯ

## ಆಚಾರ್ಯ ಮಧ್ವರ ಗೀತಾ ತಾತ್ಪರ್ಯದ ಅವತರಣಿಕೆ

ಮಹಾಭಾರತದ ಬಗೆಗೆ, ಅದರ ಭಾಗವಾದ ಭಗವದ್‌ಗೀತೆಯ ಬಗೆಗೆ ಬ್ರಹ್ಮಾಂಡ ಪುರಾಣ ಹೀಗೆ ಹೇಳುತ್ತದೆ:

"ಎಲ್ಲ ಶಾಸ್ತ್ರಗಳ ಸಾರ ಮಹಾಭಾರತ. ಮಹಾಭಾರತದ ಸಾರ ವಿಷ್ಣು ಸಹಸ್ರ ನಾಮ ಮತ್ತು ಭಗವದ್ ಗೀತೆ. ಈ ಎರಡು ಗ್ರಂಥಗಳ ಅರಿವಿನಿಂದ ಮುಕ್ತಿಯ ದಾರಿ ತೆರೆದುಕೊಳ್ಳುತ್ತದೆ.

''ಭಾರತಕ್ಕೆ ಎಣೆಯಾದ ಶಾಸ್ತ್ರವೇ ಇಲ್ಲ. ಎಂದ ಮೇಲೆ ಇವುಗಳಿಗೆ ಎಣೆಯಾದ ಇನ್ನೊಂದು ಗ್ರಂಥ ಎಲ್ಲಿಂದ ತರಬೇಕು!

''ಬ್ರಹ್ಮಾದಿ ದೇವತೆಗಳು, ಋಷಿಗಳು ಸೇರಿ ಹಿಂದೊಮ್ಮೆ ಭಾರತವನ್ನೂ ಸಮಸ್ತ ವೇದಗಳನ್ನೂ (ಬುದ್ಧಿಯ) ತಕ್ಕಡಿಯಲ್ಲಿಟ್ಟು ತೂಗಿದರು. ಆಗ ಭಾರತದ ತಟ್ಟೆಯೆ ಭಾರದಿಂದ ಜಗ್ಗಿತು.

''ಇದು ಗಾತ್ರದಲ್ಲೂ ಅರ್ಥದಲ್ಲೂ ಮಹತ್ತಾದ ಕೃತಿ; ಭಾರವತ್ತಾದ ಕೃತಿ. ಅದಕೆಂದೆ ಮಹಾಭಾರತ ಎಂದು ಹೆಸರಾಯಿತು. ಇದರ ಈ ಅರ್ಥ ನಿರ್ವಚನವನ್ನು ತಿಳಿದವನು ಎಲ್ಲ ಪಾಪಗಳಿಂದ ಮುಕ್ತನಾಗುತ್ತಾನೆ.

''ಬ್ರಹ್ಮ, ರುದ್ರ, ಇಂದ್ರಾದಿ ದೇವತೆಗಳಿಂದ ಪ್ರಾರ್ಥಿತನಾದ ನಾರಾಯಣನೆ ಸ್ವತಃ ವ್ಯಾಸನಾಗಿ ಅವತರಿಸಿ 'ಮಹಾಭಾರತ'ವೆಂದು ಹೆಸರಾದ ಈ ಗ್ರಂಥವನ್ನು ರಚಿಸಿ ದನು. ಐದನೆಯ ವೇದವೆಂದು ಖ್ಯಾತವಾದ ಈ ಕೃತಿ ಕೇವಲ ಪರತತ್ವದ ನಿರ್ಣಯ ಕ್ಕಾಗಿ ನಿರ್ಮಾಣಗೊಂಡಿದೆ."

ಅರ್ಜುನ ಇಂದ್ರನ ಪೂರ್ಣಾವತಾರ. ಅದರಿಂದಲೆ ಜ್ಞಾನಮಾರ್ಗದ ಅಧಿಕಾರಿ ಗಳಲ್ಲಿ ಹಿರಿಯ ಚೇತನ. ಅವಕೆಂದೆ ಭಗವಂತನಿಗೆ ಅತ್ಯಂತ ಪ್ರೀತಿ ಪಾತ್ರ. ಅವನಿಗೂ ಬಂಧು ಸ್ನೇಹದ ಮುಸುಕು ಕವಿದಾಗ ಧರ್ಮದ ಬಗ್ಗೆ ಸಂದೇಹ ಬಂತು. ಭಗವಂತ ನನ್ನು ದ್ವೇಷಿಸುವವರು ಮತ್ತು ಅಂಥವರನ್ನು ಬೆಂಬಲಿಸುವವರು ನಿಜವಾಗಿ ಶಿಕ್ಷಾರ್ಹರು. ಅಂಥವರ ನಿಗ್ರಹ ಕ್ಷತ್ರಿಯರಿಗಂತು ಮುಖ್ಯ ಕರ್ತವ್ಯವಾದ ಪರಮಧರ್ಮ. ಆದರೆ ಬಾಂಧವ್ಯ ಬಂಧದಿಂದ ಅರ್ಜುನನಿಗೆ ಅದು ಅಧರ್ಮವಾಗಿ ಕಂಡಿತು. ಅದಕೆಂದೆ ಅವನು ತನ್ನ ಧರ್ಮವಾದ ಯುದ್ಧದ ಕರ್ತವ್ಯವನ್ನು ಕೈಬಿಡಬಯಸಿದ. ಆಗ ಭಗವಾನ್ ನಾರಾ ಯಣ ಅವನಿಗೆ ಧರ್ಮದ ಮರ್ಮವನ್ನು ಬೋಧಿಸಿದ.

ತಮ್ಮ ಸ್ವಭಾವಕ್ಕೆ ವಿಹಿತವಾದ ವೃತ್ತಿಯಿಂದ ಬದುಕುತ್ತ ಭಕ್ತಿಯಿಂದ ಭಗವಂತ

ನನ್ನು ಆರಾಧಿಸುವುದೆ ಧರ್ಮಗಳ ಒಟ್ಟು ಸಾರ. ಇದಕ್ಕೆ ವಿರುದ್ಧವಾದುದೆಲ್ಲ ಅಧರ್ಮ. ಭಗವಂತನತ್ತ ಸಾಗುವ ನಡೆಯೆಲ್ಲ ಧರ್ಮ; ಭಗವಂತನಿಗೆ ಬೆನ್ನು ತಿರುಗಿಸಿ ಬದುಕುವುದೊಂದೆ ಅಧರ್ಮ. ಏಕೆಂದರೆ ಎಲ್ಲವೂ ಭಗವಂತನ ಅಧೀನ - ಇದು ಭಗವಂತ ಗೀತೆಯ ಮೂಲಕ ನೀಡಿದ ಒಟ್ಟು ಸಂದೇಶದ ಸಾರ.

ಈ ಮಾತು ಗೀತೆಯ ಮುಂದಿನ ಶ್ಲೋಕಗಳಿಂದ ಸ್ಫುಟವಾಗುತ್ತದೆ. ಯುದ್ಧ ಅರ್ಜುನನ ಸ್ವಧರ್ಮ ಎನ್ನುವುದರ ಬಗೆಗೆ:

''ಧರ್ಮಸಮ್ಮತವಾದ ಈ ಯುದ್ಧವನ್ನು ನೀನು ಮಾಡುವುದಿಲ್ಲವೆಂದಾದರೆ ನೀನು ಧರ್ಮಚ್ಯುತನಾಗುವೆ. ಇಹದಲ್ಲಿ ಕೀರ್ತಿಹೀನನಾಗಿ ಪರದಲ್ಲಿ ಪಾಪ ಕಟ್ಟಿಕೊಳ್ಳುವೆ.'' (2. 33)

ಸ್ವಧರ್ಮಕ್ಕೆ ಅನುಗುಣವಾಗಿ ಭಗವದಾರಾಧನವೆ ಮುಖ್ಯ ಕರ್ತವ್ಯ, ಉಳಿದದ್ದೆಲ್ಲ ತ್ಯಾಜ್ಯ ಎನ್ನುವ ಬಗೆಗೆ:

''ಜಗತ್ತಿನ ಎಲ್ಲ ಪ್ರವೃತ್ತಿಯೂ ಭಗವಂತನಿಂದ ನಿಯಂತ್ರಿತ. ಅವನು ಎಲ್ಲೆಡೆಯೂ ತುಂಬಿದ್ದಾನೆ. ಸ್ವವಿಹಿತ ಕರ್ಮಾಚರಣೆಯಿಂದ ಅವನನ್ನು ಆರಾಧಿಸಿ ಮನುಷ್ಯ ಸಿದ್ಧಿಯನ್ನು ಪಡೆಯ ಬಲ್ಲ.'' (18. 46)

''ನಮ್ಮ ಸ್ವಭಾವಕ್ಕೆ ಒಗ್ಗದ ಧರ್ಮವನ್ನು ಸಂಪೂರ್ಣವಾಗಿ ಮೈಗೂಡಿಸಿಕೊಳ್ಳುವುದಕ್ಕಿಂತ ನಮಗೆ ಸಹಜವಾದ ಧರ್ಮವನ್ನು ಅಪೂರ್ಣವಾಗಿಯಾದರೂ ಆಚರಿಸುವುದು ಮೇಲು.'' (18. 47)

''ಎಲ್ಲಕ್ಕಿಂತಲು ರಹಸ್ಯವಾದಂಥ, ಅತಿ ಮುಖ್ಯವಾದ ಮಾತನ್ನು ನಿನಗೆ ಹೇಳುತ್ತೇನೆ ಕೇಳು. ನೀನು ನನಗೆ ತುಂಬ ಪ್ರಿಯನಾದವ. ಅದಕೆಂದೆ ನಿನಗೆ ಈ ಹಿತದ ನುಡಿಯನ್ನು ಹೇಳುತ್ತಿದ್ದೇನೆ. ನನ್ನಲ್ಲೆ ಮನಸ್ಸನ್ನಿಡು. ನನ್ನ ಭಕ್ತನಾಗು. ನನ್ನನ್ನೆ ಆರಾಧಿಸು. ನನಗೆಯೆ ನಿನ್ನ ದೇಹ ಮಣಿಯಲಿ. ಅಂದರೆ ನೀನು ನನ್ನನೆ ಸೇರುವೆ. ನೀನು ನನ್ನ ಪ್ರಿಯ. ಅದಕೆಂದೆ ಆಣೆಯಿಟ್ಟು ಹೇಳುತ್ತಿದ್ದೇನೆ. ಇದು ನಿಜ. ಎಲ್ಲ ಧರ್ಮಗಳನ್ನೂ ಐಹಿಕ ಕಾಮನೆಗಳನ್ನು ತೊರೆದು ಆಚರಿಸು. ಎಲ್ಲವನ್ನೂ ನನಗೆ ಅರ್ಪಿಸಿ ನನ್ನೊಬ್ಬನನ್ನೆ ಶರಣಾಗು. ನಾನು ನಿನ್ನನ್ನು ಪಾಪದ ಎಲ್ಲ ಬಂಧನಗಳಿಂದ ಬಿಡುಗಡೆಗೊಳಿಸುತ್ತೇನೆ. ದುಃಖಿಸದಿರು.'' (18. 64 – 66)

ವಿಷ್ಣುಭಕ್ತಿಯೆ ಸಾಧನಗಳಲ್ಲಿ ಹಿರಿಯ ಸಾಧನ; ಭಕ್ತಿಯಿಂದಲೆ ಪರೋಕ್ಷಜ್ಞಾನ, ಭಕ್ತಿಯಿಂದಲೆ ಅಪರೋಕ್ಷಜ್ಞಾನ; ಜ್ಞಾನಿಗೆ ಮೋಕ್ಷಕೂಡ ಭಕ್ತಿಯಿಂದಲೆ ಎನ್ನುವುದರ ಬಗೆಗೆ:

''ವೇದಗಳಿಂದ, ತಪಸ್ಸಿನಿಂದ, ದಾನಧರ್ಮಗಳಿಂದ, ಯಜ್ಞಯಾಗಗಳಿಂದ ಇನ್ನಾವ ಸಾಧನದಿಂದಲು ಯಾವನೂ ಕೂಡ ನನ್ನನ್ನು ನೀನು ಕಂಡ ಬಗೆಯಲ್ಲಿ ಕಾಣುವುದು ಸಾಧ್ಯವಿಲ್ಲ. ನನ್ನನ್ನು ಈ ಬಗೆಯಲ್ಲಿ ಕಾಣುವುದು ಅನನ್ಯವಾದ ಭಕ್ತಿಯಿಂದ

ಮಾತ್ರವೇ ಸಾಧ್ಯ. ಭಕ್ತಿಯಿಂದ ಜ್ಞಾನ, ಭಕ್ತಿಯಿಂದ ಸಾಕ್ಷಾತ್ಕಾರ; ಭಕ್ತಿಯಿಂದಲೆ ಮೋಕ್ಷ.'' (11. 53 – 54)

ಭಕ್ತನಾದವನು ಕೂಡ ಭಗವತ್ ಕರ್ಮದಲ್ಲಿ ತೊಡಗಬೇಕು ಮತ್ತು ನಿಷಿದ್ಧ ಕರ್ಮವನ್ನು ಬಿಡಬೇಕು ಎನ್ನುವುದರ ಬಗೆಗೆ:

''ನನ್ನ ಆರಾಧನಾರೂಪವಾಗಿ ವಿಹಿತ ಕರ್ಮಗಳನ್ನು ಮಾಡಬೇಕು. ನಾನೆ ಎಲ್ಲಕ್ಕಿಂತ ಹಿರಿಯ ತತ್ವ ಎಂದು ತಿಳಿದು ನನ್ನಲ್ಲಿ ಭಕ್ತಿಯಿಡಬೇಕು, ವಿಷಯದ ಸಂಗ ತೊರೆಯಬೇಕು. ಸಮಸ್ತ ಪ್ರಾಣಿಗಳಲ್ಲಿ ಯಾವುದನ್ನೂ ದ್ವೇಷಿಸಬಾರದು. ಇಂಥವನು ನನ್ನನ್ನು ಸೇರುತ್ತಾನೆ.'' (11. 55)

ಜ್ಞಾನಿಯೂ ಕರ್ಮಾಚರಣೆ ಮಾಡಬೇಕು ಎನ್ನುವ ಬಗೆಗೆ:

''ಪ್ರಾಚೀನರೆಲ್ಲ ಕರ್ಮದ ದಾರಿಯಲ್ಲಿ ಸಾಗಿದರು, ಅವರಿಗಿಂತ ಹಿಂದೆಯೂ ಕರ್ಮದ ಪರಂಪರೆಯಿತ್ತು. ಅದರಿಂದ ನೀನೂ ಕರ್ಮದಲ್ಲಿ ತೊಡಗು.'' (4. 15)

ಅರ್ಜುನ ಉತ್ತಮಾಧಿಕಾರಿ ಮತ್ತು ಅಪರೋಕ್ಷ ಜ್ಞಾನಿ ಎನ್ನುವ ಬಗೆಗೆ:

''ಎಂಥೆಂಥವರೂ ಕಾಣಲಾಗದ ನನ್ನ ರೂಪವನ್ನು ನೀನು ಕಂಡೆ. ದೇವತೆಗಳು ಕೂಡ ಈ ರೂಪದ ಕಾಣ್ಕೆಗಾಗಿ ನಿತ್ಯ ದಾರಿಕಾಯುತ್ತಿರುತ್ತಾರೆ.'' (11. 52)

"ನೀನು ನನಗೆ ಅತ್ಯಂತ ಪ್ರಿಯನಾಗಿದ್ದೀಯಾ'' (18. 64)

''ದೈವೀ ಸಂಪತ್ತು ಮೋಕ್ಷದ ಕಡೆಗೆ ಒಯ್ಯುತ್ತದೆ. ಆಸುರೀ ಸಂಪತ್ತು ತಮಸ್ಸಿನ ಕಡೆಗೆ ಒಯ್ಯುತ್ತದೆ. ಆದರೆ ಅರ್ಜುನ! ನೀನು ದುಃಖಿಸಬೇಕಾದ ಕಾರಣವಿಲ್ಲ. ನೀನು ದೈವೀ ಸಂಪತ್ತನ್ನು ಹೊತ್ತು ಬಂದವನು." (16 - 5)

''ಸಾತ್ವಿಕ ಸ್ವಭಾವದ ದೈವೀ ಸಂಪತ್ತನ್ನು ಪಡೆದು ಬಂದವರು ಮಹಾತ್ಮರು. ನಾನು ಎಲ್ಲ ಜಗತ್ತಿನ ಮೂಲ, ನನ್ನ ಮಹಿಮೆಗೆ ಚ್ಯುತಿಯಿಲ್ಲ ಎಂದು ಅರಿತ ಪುಣ್ಯವಂತರು. ಅವರು ಅನನ್ಯವಾಗಿ ನನ್ನನ್ನೆ ಭಜಿಸುತ್ತಾರೆ.'' (9. 13)

''ಅರ್ಜುನನಿಗೆ ತನ್ನ ಈಶ್ವರೀಯ ಶಕ್ತಿಯ ಪರಮ ರೂಪವನ್ನು ತೋರಿಸಿದನು." (11. 9)

ಭಗವಂತ ಎಲ್ಲಕ್ಕಿಂತ ಭಿನ್ನ, ಎಲ್ಲವೂ ಭಗವಂತನ ಅಧೀನ, ಅವನು ಯಾರ ಅಧೀನವೂ ಅಲ್ಲ, ಅವನು ಸರ್ವೋತ್ತಮ ತತ್ವ, ಸರ್ವಗುಣ ಪರಿಪೂರ್ಣ, ಎಲ್ಲ ಶಾಸ್ತ್ರಗಳೂ ಅವನೊಬ್ಬನನ್ನೆ ಪ್ರತಿಪಾದಿಸುತ್ತವೆ, ಮತ್ತು ಅವನ ಅರಿವಿನಿಂದಲೆ ಮೋಕ್ಷ ಎನ್ನುವುದರ ಬಗೆಗೆ:

"ದೇವತೆಗಳಾಗಲಿ, ಮಹರ್ಷಿಗಳಾಗಲಿ ಯಾರೂ ನನ್ನ ಮಹಿಮೆಯನ್ನು ಅರಿತವರಿಲ್ಲ. ದೇವತೆಗಳನ್ನು, ಋಷಿಗಳನ್ನು ಎಲ್ಲರನ್ನೂ ಸೃಷ್ಟಿಸಿದ ಮೂಲ ಪುರುಷ ನಾನಲ್ಲವೆ?'' (10. 2)

''ನಾನು ಯಾರಿಂದಲು ಹುಟ್ಟಿಲ್ಲ. ಎಲ್ಲವೂ ನನ್ನಿಂದ ಹುಟ್ಟಿದೆ. ಎಲ್ಲದರ ಪ್ರೇರಕ, ಎಲ್ಲವರ ಒಡೆಯ ನಾನೊಬ್ಬನೆ. ಹೀಗೆ ತಿಳಿದವನು ಮೋಹದಿಂದ ಪಾರಾಗಿ ಎಲ್ಲ ಪಾಪಗಳಿಂದ ಬಿಡುಗಡೆಗೊಳ್ಳುತ್ತಾನೆ." (10. 3)

''ತಿಳಿವು, ಕಾರ್ಯಾಕಾರ್ಯ ವಿವೇಕ, ಮೋಹಗೊಳ್ಳದಿರುವಿಕೆ, ಕ್ಷಮೆ, ಸತ್ಯ, ಇಂದ್ರಿಯನಿಗ್ರಹ, ಭಗವನಿಷ್ಠೆ (ಇಂಥ ಎಲ್ಲ ಭಾವಗಳೂ ನನ್ನ ಕೊಡುಗೆ)'' (10. 4)

"ಪ್ರಾಚೀನರಾದ ಸಪ್ತರ್ಷಿಗಳು (ಮುಂತಾದವರೆಲ್ಲ ನನ್ನಿಂದ ಸೃಷ್ಟಿಯಾದರು.)" (10. 6)

"ನನ್ನ ಈ ಮಹಿಮೆಯನ್ನೂ ಸಾಮರ್ಥ್ಯವನ್ನೂ ತಿಳಿದವನು (ಯೋಗ ಸಿದ್ಧಿಯನ್ನು) ಪಡೆಯುತ್ತಾನೆ.'' (10. 7)

"ಎಲ್ಲವನ್ನೂ ಸೃಷ್ಟಿಸಿದವನು ನಾನು. ಎಲ್ಲ ಪ್ರವೃತ್ತಿಗೂ ನಾನೆ ಮೂಲ. ಭಕ್ತರಾದ ಜ್ಞಾನಿಗಳು ಹೀಗೆ ತಿಳಿದು ನನ್ನನ್ನು ಆರಾಧಿಸುತ್ತಾರೆ.'' (10. 8)

"ಅಂಥವರ ಮೇಲೆ ಕರುಣೆಯಿಂದ ನಾನು ಅವರ ಅಜ್ಞಾನದ ಕತ್ತಲನ್ನು ಕಳೆಯುತ್ತೇನೆ. ಅವರ ಅಂತರಂಗದಲ್ಲಿ ಬಂದು ನೆಲಸುತ್ತೇನೆ." (10 . 11)

"ಅಂಥವರನ್ನು ನಾನು ಈ ಹುಟ್ಟು ಸಾವಿನ ಸಂಸಾರದ ಕಡಲಿನಿಂದ ಪಾರು ಗಾಣಿಸುತ್ತೇನೆ.'' (12. 7)

"ಸಮಸ್ತ ಯಜ್ಞಗಳನ್ನೂ ತಪಸ್ಸುಗಳನ್ನೂ ಸ್ವೀಕರಿಸುವವನು ನಾನು. ಎಲ್ಲ ಲೋಕಗಳ ಹಿರಿಯ ಒಡೆಯ ನಾನು. ಎಲ್ಲ ಜೀವಿಗಳ ಅಂತರಂಗದ ಗೆಳೆಯ ನಾನು. ಹೀಗೆ ತಿಳಿದವನು ಮೋಕ್ಷ ಪಡೆಯುತ್ತಾನೆ." (5. 29)

ನನ್ನ ಮಹಿಮೆಯ ತಿಳಿವನ್ನೂ ಅದರ ವಿಶೇಷವಿವರಗಳನ್ನೂ ನಿನಗೆ ಸಮಗ್ರವಾಗಿ ತಿಳಿಹೇಳುತ್ತೇನೆ. ಇದಿಷ್ಟನ್ನು ತಿಳಿದರೆ ಮತ್ತೆ ತಿಳಿಯುವಂಥದು ಏನೂ ಉಳಿದಿರುವುದಿಲ್ಲ." (7. 2)

"ಎಲ್ಲ ಜಗತ್ತನ್ನು ಸೃಷ್ಟಿಸುವವನು ನಾನು. ಸಂಹರಿಸುವವನು ನಾನು. ನನಗಿಂತ ಹಿರಿದಾದ ಇನ್ನೊಂದು ತತ್ವ ಇಲ್ಲ. ನೂಲಿನಲ್ಲಿ ಮಣಿಗಳು ಹೆಣೆದುಕೊಂಡಂತೆ ಇಡಿಯ ವಿಶ್ವ ನನ್ನಲ್ಲಿ ಹೆಣೆದುಕೊಂಡಿದೆ." (7. 6 - 7)

''ನಿನಗೆ ಪರತತ್ವದ ಬಗೆಗೆ ಅಸೂಯೆಯಿಲ್ಲ. ಶ್ರದ್ಧೆಯಿದೆ. ಆದಕೆಂದೆ ನಿನಗೆ ಈ ರಹಸ್ಯವನ್ನು ಹೇಳುತ್ತಿದ್ದೇನೆ. ಅಧ್ಯಾತ್ಮದ ಅರಿವು, ಅಧ್ಯಾತ್ಮದ ವಿಜ್ಞಾನ ಎಲ್ಲವನ್ನೂ ನಿನ್ನ ಮುಂದೆ ತೆರೆದಿಡುತ್ತೇನೆ. ಇವರ ಅರಿವಿನಿಂದ ನೀನು ಎಲ್ಲ ಅಶುಭಗಳಿಂದ ಮುಕ್ತನಾಗುವೆ.'' (9. 1)

"ಇದು ವಿದ್ಯೆಗಳಲ್ಲಿ ಹಿರಿಯ ವಿದ್ಯೆ. ಗುಹ್ಯಗಳಲ್ಲಿ ಪರಮ ಗುಹ್ಯ." (9. 2)

"ನಾನು ಅವ್ಯಕ್ತವಾಗಿ ಈ ಜಗತ್ತನ್ನೆಲ್ಲ ವ್ಯಾಪಿಸಿದ್ದೇನೆ. ಎಲ್ಲವೂ ನನ್ನನ್ನು ಆಧರಿಸಿಕೊಂಡಿದೆ. ನಾನು ಯಾರ ಆಸರೆಯಲ್ಲೂ ಇಲ್ಲ." (9. 4)

"ನಾನು ಎಲ್ಲ ಭೂತಗಳನ್ನು ಧರಿಸಿದ್ದೇನೆ; ಅವುಗಳನ್ನು ಆಧರಿಸಿ ನಾನು ನಿಂತಿಲ್ಲ." (9. 5)

"ನಿನಗೆ ಎಣೆಯಾದವನೆ ಇಲ್ಲ. ಮಿಗಿಲಾದವನ ಮಾತು ಎಲ್ಲಿ?" (11. 43)

"ತಿಳಿವಿನಲ್ಲಿ ಮಿಗಿಲಾದ ತಿಳಿವಾದ ಅಧ್ಯಾತ್ಮಜ್ಞಾನವನ್ನು ನಿನಗೆ ಇನ್ನಷ್ಟು ವಿವರಿಸುತ್ತೇನೆ." (14. 1)

"ಪ್ರಕೃತಿಯ ದೇವತೆಯಾದ ಶ್ರೀತತ್ತ್ವ ನನ್ನ ಪತ್ನಿ. ನಾನು ಆಕೆಯಲ್ಲಿ ವಿಶ್ವದ ಗರ್ಭವನ್ನು ನಿಹಿತಗೊಳಿಸುತ್ತೇನೆ. ಅದರಿಂದ ಸಮಸ್ತ ಜೀವಜಾತಗಳ ಸೃಷ್ಟಿಯಾಗುತ್ತದೆ." (14. 3)

''ನಾಶವಿಲ್ಲದ, ವಿಕಾರವಿಲ್ಲದ ಶ್ರೀತತ್ತ್ವಕ್ಕೆ ನಾನು ಆಸರೆ. ಶಾಶ್ವತವಾದ ಧರ್ಮಕ್ಕೆ ಅದರಿಂದ ದೊರಕುವ ಏಕಾಂತ ಸುಖಕ್ಕೆ ನಾನೆ ನೆಲೆ." (14. 27)

"ಜೀವಜಾತವೆಲ್ಲ ಕ್ಷರ ಪುರುಷ. ನಿರ್ವಿಕಾರವಾದ ಶ್ರೀತತ್ತ್ವವೆ ಅಕ್ಷರ ಪುರುಷ: ಹೀಗೆ ಬ್ರಹ್ಮಾಂಡದಲ್ಲಿ ನೆಲೆಸಿದ (ಪುರುಷ) ಶಕ್ತಿಗಳು ಎರಡು ಬಗೆ. ಇವರಿಗಿಂತ ಮಿಗಿಲಾದ ಉತ್ತಮ ಪುರುಷನೆ ಪರಮಾತ್ಮ. ಅವನೆ ಮೂರು ಲೋಕದ ಒಳಗು ಹೊರಗು ತುಂಬಿ ಎಲ್ಲವನ್ನು ಧರಿಸಿದ ಪರಮೇಶ್ವರ.'' (15. 16 - 17)

''ನಾನು ಕ್ಷರ ಪುರುಷರಾದ ಬ್ರಹ್ಮಾದಿಗಳನ್ನೂ ಅಕ್ಷರಳಾದ ಪ್ರಕೃತಿಯನ್ನೂ ಮೀರಿ ನಿಂತಿರುವುದರಿಂದಲೆ ನನ್ನನ್ನು ಶ್ರುತಿ – ಸ್ಮೃತಿಗಳು ಪುರುಷೋತ್ತಮ ಎಂದು ಕರೆಯುತ್ತವೆ. ಯಾರು ಮೋಹಾತೀತನಾಗಿ ನನ್ನನ್ನು ಪುರುಷೋತ್ತಮನೆಂದು ತಿಳಿಯುವನೋ ಅವನು ಎಲ್ಲವನ್ನೂ ತಿಳಿದವನು. ಅವನು ಎಲ್ಲ ರೀತಿಯಲ್ಲೂ ನನ್ನನ್ನೆ ಭಜಿಸುತ್ತಾನೆ. ಇದು ಅತ್ಯಂತ ರಹಸ್ಯವಾದ ಮಾತು. ಇದನ್ನು ನಿನಗೆ ತಿಳಿಯಪಡಿಸಿದ್ದೇನೆ. ಇದನ್ನು ತಿಳಿದವನು ಭಗವಂತನನ್ನು ಸಾಕ್ಷಾತ್ಕರಿಸುತ್ತಾನೆ; ಮೋಕ್ಷವನ್ನು ಪಡೆಯುತ್ತಾನೆ.'' (15. 18 - 20)

★

# ಗೀತೆಯ ಸಂದೇಶ

— ಬನ್ನಂಜೆ ಗೋವಿಂದಾಚಾರ್ಯ

"ನನಗೆ ಮೂರು ಲೋಕಗಳಲ್ಲಿ ಮಾಡಿ ಸಾಧಿಸಬೇಕಾದ್ದು ಏನೂ ಇಲ್ಲ. ನನ್ನಲ್ಲಿ ಇಲ್ಲದ್ದು, ಸಾಧಿಸಿ ಪಡೆಯಬೇಕಾದ್ದು ಯಾವುದೂ ಇಲ್ಲ." (3. 22)

ಶ್ರುತಿವಚನಗಳೂ ಇದೇ ಮಾತನ್ನು ಸಮರ್ಥಿಸುತ್ತವೆ: "ಓ ವಿಷ್ಣುವೆ, ವಿದ್ವಾಂಸರು ನಿನ್ನನ್ನು ಸ್ತುತಿಗಳಿಂದ ಪ್ರಾರ್ಥಿಸುತ್ತಾರೆ. ಕರ್ಮಯೋಗಿಗಳು ನಿನ್ನನ್ನೆ ಯಜ್ಞಗಳಿಂದ ಆರಾಧಿಸುತ್ತಾರೆ."

"ಭಗವಂತನನ್ನು ಸಾಕ್ಷಾತ್‌ಕರಿಸಿಕೊಂಡವನು ಕೂಡ ನಿರ್ವಿಚಾರವಾಗಿ ಕರ್ಮವನ್ನು ಮಾಡುತ್ತಿರಬೇಕು. ಅದರಿಂದ ಅವನು ಮೋಕ್ಷಾನಂದದಲ್ಲಿ ಉತ್‌ಕರ್ಷವನ್ನು ಅನುಭವಿಸುತ್ತಾನೆ."

ಭಕ್ತಿಗೆ ಒಲಿದ ಭಗವಂತ ಶುದ್ಧವಾದ ಜ್ಞಾನವನ್ನು ಕರುಣಿಸುತ್ತಾನೆ. ಜೊತೆಗೆ ಇನ್ನಷ್ಟು ಭಕ್ತಿಯನ್ನು ಕರುಣಿಸುತ್ತಾನೆ. ಅಂಥ ಜ್ಞಾನ – ಭಕ್ತಿಗಳಿಂದ ಪ್ರಸನ್ನನಾಗಿ ಭಕ್ತನಿಗೆ ದರ್ಶನ ನೀಡುತ್ತಾನೆ. ದರ್ಶನದಿಂದ ಭಕ್ತಿ ಇನ್ನಷ್ಟು ಉತ್ಕಟವಾಗುತ್ತದೆ. ಇಂಥ ಅಪರೋಕ್ಷ ಮತ್ತು ಉತ್ಕಟ ಭಕ್ತಿಯ ಫಲವಾಗಿ ಮೋಕ್ಷವನ್ನು ಕರುಣಿಸುತ್ತಾನೆ. ಮುಕ್ತಿಯಲ್ಲು ಜೀವ ಭಗವಂತನ ಅಧೀನನಾಗಿಯೆ ಇರುತ್ತಾನೆ. ಮುಕ್ತಿಯಲ್ಲು ಭಕ್ತಿಯಿಂದ ಮೈಮರೆಯುತ್ತಾನೆ. ಮುಕ್ತಿಯು ಭಕ್ತಿ ಆನಂದದ ಆವಿಷ್ಕಾರವೇ ಆಗಿರುತ್ತದೆ ಹೊರತು ಅದೊಂದು ಪ್ರಯತ್ನ ಪೂರ್ವಕವಾದ ಸಾಧನೆಯಲ್ಲ."

"ಭಗವಂತ ರಮಾ, ಬ್ರಹ್ಮ, ರುದ್ರಾದಿಗಳಿಗಿಂತಲು ಉತ್ತಮನಾಗಿದ್ದಾನೆ. ಸ್ವತಂತ್ರನಾಗಿದ್ದಾನೆ. ಉಳಿದೆಲ್ಲವೂ ಅವನ ಅಧೀನವಾಗಿದೆ. ಅವನು ಎಲ್ಲ ಗುಣಗಳ ನೆಲೆ. ಅವನಲ್ಲಿ ಯಾವ ದೋಷಗಳೂ ಇಲ್ಲ – ಹೀಗೆ ತಿಳಿದು ಎಲ್ಲರಿಗಿಂತ ಮಿಗಿಲಾಗಿ ವಿಷ್ಣುವನ್ನು ಪ್ರೀತಿಸುವುದೇ ನಿಜವಾದ ಭಕ್ತಿ. ಇದೇ ಮೋಕ್ಷಸಾಧನಗಳಲ್ಲೆಲ್ಲ ಹಿರಿಯ ಸಾಧನ. ಭಕ್ತಿಯಿಂದಲೆ ಮೋಕ್ಷ ಹೊರತು ಇನ್ನೇತರಿಂದಲು ಸಾಧ್ಯವಿಲ್ಲ. ಅಪರೋಕ್ಷ ಕೂಡ ಭಕ್ತಿಯ ಉತ್ಕಟತೆಗೆ ಸಾಧನ."

"ಮನುಷ್ಯರು ಮೋಕ್ಷಾಧಿಕಾರಿಗಳಲ್ಲಿ ಅಧಮರು. ಋಷಿಗಳು ಮಧ್ಯಮರು. ದೇವತೆಗಳೆ ಉತ್ತಮಾಧಿಕಾರಿಗಳು. ಪ್ರಾಣತತ್ತ್ವವೊಂದೆ ಅಧಿಕಾರಿಗಳಲ್ಲಿ ಉತ್ತಮೋತ್ತಮ.

"ಭಗವಂತನ ಸಾಕ್ಷಾತ್ಕಾರ ಪಡೆಯದವರು ದೇವಪದವಿಯನ್ನು ಪಡೆಯಲಾರರು. ಆದರೂ ಒಮ್ಮೊಮ್ಮೆ ಅಂಥವರ ಅರಿವೂ ಮುಸುಕಾಗುವುದುಂಟು. ಆಗ ಅವರು ಉತ್ತಮರಿಂದ ಕೇಳಿ ಮಾರ್ಗದರ್ಶನ ಪಡೆಯುತ್ತಾರೆ. ಕೆಲವೊಮ್ಮೆ ಇಂಥ ಪ್ರಶ್ನೋತ್ತರ ಜ್ಞಾನಿಗಳು ಲೋಕ ಶಿಕ್ಷಾರ್ಥವಾಗಿ ನಡೆಸುವ ಲೀಲಾ ವಿನೋದವೂ

ಆಗಿರಬಹುದು. ಕೇಳಿ ಕೇಳಿ ಬಹಳ ಬಾರಿ ಮಥನ ಮಾಡುವುದರಿಂದ ಮುಸುಕು ಕಳೆದು ಜ್ಞಾನ ಪರಿಸ್ಫುಟವಾಗುತ್ತದೆ. ಆಗ ಅದು ಮತ್ತೆಂದೂ ಮರೆಯಾಗದು. ದೇವತೆಗಳು ಕ್ಷತ್ರವಂಶದಲ್ಲಿ ಪಾಂಡವರಾಗಿ ಜನಿಸಿದಾಗ ಹೀಗಾಯಿತು. ವ್ಯಾಸ ಮುನಿಯಿಂದ ಪದೇ ಪದೇ ಅನುಶಿಷ್ಟರಾದ ಅವರ ತಿಳಿವು ಎಂದೂ ತಿರೋಹಿತವಾಗದೆ ಸ್ಥಿರವಾಗಿ ಉಳಿಯಿತು.''

"ಇಷ್ಟಪ್ರದನಾದ, ಇಚ್ಛಾರೂಪನಾದ ಈ ವಿಷ್ಣುದೇವನನ್ನು ಹವಿಸ್ಸಿತ್ತು ಆರಾಧಿಸಿದ ಫಲವಾಗಿ ಬಂಧಕನಾದ ರುದ್ರದೇವ ರುದ್ರ ಪದವಿಯ ಹಿರಿಮೆಯನ್ನು ಪಡೆದ. ಓ ಅಶ್ವಿಗಳೆ, ಅನ್ನಸಮೃದ್ಧವಾದ ನಿಮ್ಮ ಇರುವಿಕೆಯೂ ಅವನ ಅನುಗ್ರಹದ ಫಲವೆ ಅಲ್ಲವೆ?''

"ಆದಿಯಲ್ಲಿ ನಾರಾಯಣನೊಬ್ಬನೆ ಇದ್ದ, ಬ್ರಹ್ಮನಿರಲಿಲ್ಲ. ಶಂಕರನಿರಲಿಲ್ಲ. ಅವನು ಮೌನವಾಗಿ ಚಿಂತಿಸಿದ. ಅದರ ಫಲವಾಗಿ ಈ ಬ್ರಹ್ಮ, ವಾಯು, ರುದ್ರ, ಇಂದ್ರ, ಯಮ, ವರುಣ, ಅಗ್ನಿ ಇವರೆಲ್ಲ ಹುಟ್ಟಿದರು."

"ನಾರಾಯಣನೊಬ್ಬನೆ ಇದ್ದ. ಆಗ ಬ್ರಹ್ಮನಾಗಲಿ, ಈಶಾನನಾಗಲಿ ಇರಲಿಲ್ಲ"

"ಈ ಸೃಷ್ಟಿಯ ಪೂರ್ವದಲ್ಲಿ ವಾಸುದೇವನೊಬ್ಬನೆ ಇದ್ದ. ಬ್ರಹ್ಮನೂ ಇರಲಿಲ್ಲ. ಶಂಕರನೂ ಇರಲಿಲ್ಲ."

"ವಿಷ್ಣು ಯಾರನ್ನು ಬಯಸಿದರೆ ಅವನನ್ನು ಬ್ರಹ್ಮ ಪದವಿಗೇರಿಸಬಲ್ಲ. ಶಿವ ಪದವಿಗೇರಿಸಬಲ್ಲ. ಇಂದ್ರನೋ ಸ್ಕಂದನೋ, ಸೂರ್ಯನೋ, ಯಮನೋ ಎಲ್ಲರೂ ಅವನ ಸೃಷ್ಟಿ. ಅವನನ್ನು ಮಾತ್ರ ಯಾರೂ ಸೃಷ್ಟಿಸಿದವರಿಲ್ಲ.''

''ದೇವದೇವನಾದ ವಿಷ್ಣುವಿನ ಪಾರಮ್ಯದಲ್ಲಿಯೆ ಎಲ್ಲ ವೇದಗಳಿಗು ಮಹಾತಾತ್ಪರ್ಯ. ಬೇರೆ ಅರ್ಥದಲ್ಲಿ ಅವುಗಳಿಗೆ ಭರವೇ ಇಲ್ಲ. ಅಮುಖ್ಯ ಅರ್ಥದಲ್ಲಿ ಮಾತ್ರವೆ ಅವು ಇತರ ದೇವತೆಗಳನ್ನು ಉಲ್ಲೇಖಿಸುತ್ತವೆ. ಅದರಿಂದ ವಿಷ್ಣು ಸರ್ವೋತ್ತಮ ಎಂಬ ಅರಿವಿನಿಂದಲೇ ಮೋಕ್ಷ ಸಾಧ್ಯ."

"ನೀನು ಯಾವ ಮಿತಿಗು ಒಳಪಡದವನು. ನಿನ್ನ ರೂಪ ವಿಶ್ವವನ್ನೆಲ್ಲ ತುಂಬಿದೆ ನಿನ್ನ ಮಹಿಮೆಯ ಎತ್ತರವನ್ನು ಯಾರೂ ಏರಲಾರರು."

"ಭಗವಾನ್ ನಾರಾಯಣನ ಗುಣಗಳ ಮಹಿಮೆಗೆ ಅಂತವಾದವಿಲ್ಲ. ಅವನಲ್ಲಿ ದೋಷದ ಲೇಶವೂ ಇಲ್ಲ. ಅವನಿಗೆ ಸಮನಾದವನಾಗಲೀ, ಉತ್ತಮನಾಗಲೀ ಇನ್ನೊಬ್ಬನಿಲ್ಲ. ಹಿಂದೆ ಇರಲಿಲ್ಲ. ಮುಂದೆ ಬರಲಾರ. ಇನ್ನಾವುದೇ ವಿಶ್ವಶಕ್ತಿಯೂ ಈ ನಿಯತಿಯನ್ನು ಬದಲಿಸಲಾರದು.'' ಇತ್ಯಾದಿ ... ... ...

\+ \+ \+

"ಆತ್ಮಾನಂದವನ್ನು ಅನುಭವಿಸುವವನಿಗೆ ಕರ್ಮವಿಲ್ಲ'' (3. 17) ಎಂದು ಗೀತೆ ಹೇಳುತ್ತದೆ. ಆದರೆ ಇದು ಸಂಸಾರಿಗಳಿಗೆ ಸಂಬಂಧ ಪಟ್ಟ ಮಾತಲ್ಲ. ಮುಕ್ತಾವಸ್ಥೆಗೆ ಸಂಬಂಧಪಟ್ಟದ್ದು. ಸ್ಕಾಂದದ ಈ ವಚನ ಅದನ್ನು ಸಮರ್ಥಿಸುತ್ತದೆ.

"ಆತ್ಮಾನಂದದಲ್ಲಿ ಮಗ್ನನಾದ ಮುಕ್ತನಿಗೆ ಮಾತ್ರವೆ ಕರ್ಮದ ಆವಶ್ಯಕತೆ ಇಲ್ಲ. ಆದರಿಂದ ನೀನು ಕರ್ಮವನ್ನು ಮಾಡಲೇ ಬೇಕು. ಎಂದು ಶ್ರೀ ಕೃಷ್ಣ ಮುಗುಳು ನಗುತ್ತ ಅರ್ಜುನನನ್ನು ಎಚ್ಚರಿಸಿದ.''

"ಜ್ಞಾನಿಗಳಿಗೆ ಜ್ಞಾನಯೋಗದಿಂದಲೆ ಸಿದ್ಧಿ'' (3. 3) ಎನ್ನುವ ಗೀತೆಯ ವಚನ ಕೂಡ ಜ್ಞಾನಿಗಳಗೆ ಕರ್ಮವಿಲ್ಲ ಎನ್ನುವ ಅರ್ಥದಲ್ಲಿ ಬಂದದ್ದಲ್ಲ. ಒಳಗಿನ ಧ್ಯಾನದಲ್ಲಿ ಮಗ್ನರಾದಾಗ ಬಾಹ್ಯಕರ್ಮದ ಸಂಕೋಚ ತಪ್ಪಲ್ಲ ಎನ್ನುವ ಅರ್ಥದಲ್ಲಿ ಬಂದದ್ದು. ಈ ಕೆಳಗಿನ ಗೀತೆಯ ಉಲ್ಲೇಖಗಳೆ ಅದನ್ನು ಸಮರ್ಥಿಸುತ್ತವೆ:

''ಯಾವೊಬ್ಬನೂ ಒಂದು ಕ್ಷಣವೂ ಕರ್ಮವಿಲ್ಲದೆ ನಿಷ್ಕ್ರಿಯನಾಗಿ ಬದುಕಲಾರ." (3. 5)

"ನೀನು ಕರ್ಮ ಮಾಡಲಾರೆ ಎಂದರೆ ನಿಷ್ಕ್ರಿಯತೆಯಿಂದ ಈ ಬದುಕು, ಈ ದೇಹಧಾರಣೆ ಕೂಡ ಅಸಾಧ್ಯ.'' (3. 8)

''ಕರ್ಮದಲ್ಲೆ ಅತಿಯಾದ ಆಸಕ್ತಿ ಮತ್ತು ಫಲಕಾಮನೆಗಳನ್ನು ತೊರೆದು ಯಜ್ಞ ದಾನ, ತಪಸ್ಸುಗಳೆಂಬ ಕರ್ಮಗಳನ್ನು ಮಾಡುತ್ತಿರಬೇಕು ಎನ್ನುವುದೆ ನನ್ನ ನಿಶ್ಚಿತವಾದ ಅಭಿಪ್ರಾಯ.'' (18. 6)

ಬೇರೆ ಗ್ರಂಥಗಳಲ್ಲೂ ಉಲ್ಲೇಖ ಬಂದಿದೆ:

''ಜ್ಞಾನಿಯಾದವನು ಕೂಡ ವಿಹಿತಕರ್ಮಗಳನ್ನು ಸದಾ ಮಾಡುತ್ತಿರಬೇಕು. ಆದರೆ ಫಲದ ಕಾಮನೆಯನ್ನು ತೊರೆದು ಬಿಡಬೇಕು.''

"ಎಲ್ಲ ಕರ್ಮವನ್ನು ತ್ಯಾಗ ಮಾಡುವುದು ಯಾರಿಗೂ ಸಾಧ್ಯವಿಲ್ಲ. ಯತಿಗಳು ಕರ್ಮತ್ಯಾಗಿಗಳು ಎನ್ನುವ ಮಾತು ಕೂಡ – ಕರ್ಮ ಸಂಕೋಚದ ಅರ್ಥದಲ್ಲೆ ಬಂದಿದೆ. ಗೃಹಸ್ಥರಷ್ಟು ಬಾಹ್ಯಕರ್ಮದ ತೊಡಕು ಅವರಿಗಿಲ್ಲ ಎಂದಷ್ಟೇ ಅದರ ಅರ್ಥ.''

\+ \+ \+

''ತತ್ವವನ್ನು ಕಂಡ ಜ್ಞಾನಿಗಳು ನಿನಗೆ ಉಪದೇಶಿಸುತ್ತಾರೆ'' ಎಂದು ಕೃಷ್ಣ ಅರ್ಜುನನಿಗೆ ಹೇಳಿದ ಮಾತಿನಿಂದ ಅರ್ಜುನ ಅಜ್ಞಾನಿ ಎಂದು ತಿಳಿಯಬಾರದು. ಜ್ಞಾನಿಯ ಜ್ಞಾನವೂ ತಿರೋಹಿತವಾಗಬಹುದಲ್ಲ. ಹಾಗೆ ಮುಸುಕಾದ ನಿನ್ನ ತಿಳಿವನ್ನು ಜ್ಞಾನಿಗಳು ತಿಳಿಗೊಳಿಸುತ್ತಾರೆ ಎಂದಷ್ಟೇ ಅದರ ಭಾವ. ★

# ಭಗವದ್‌ಗೀತೆ

— ಬನ್ನಂಜೆ ಗೋವಿಂದಾಚಾರ್ಯ

ಮೂರು ಮಂದಿ ಪ್ರಮುಖಭಾಷ್ಯಕಾರರು ಗೀತೆಯ ಪ್ರಸ್ತಾವನೆಯಾಗಿ ಏನನ್ನು ಹೇಳಿದ್ದಾರೆ ಎನ್ನುವುದನ್ನು ಅವರ ಮಾತುಗಳಲ್ಲೆ ಕಂಡದ್ದಾಯಿತು. ಶಂಕರರು ಮತ್ತು ರಾಮಾನುಜರು ಕೃಷ್ಣಾವತಾರದ ಹಿನ್ನೆಲೆಯಲ್ಲಿ ಗೀತೆಗೆ ಅವತರಣಿಕೆ ರಚಿಸಿದ್ದರೆ ಮಧ್ವರು ವ್ಯಾಸಾವತಾರದ ಪ್ರಸ್ತಾವನೆಯೊಂದಿಗೆ ಅವತರಣಿಕೆ ರಚಿಸಿದ್ದಾರೆ. ಈ ಒಂದು ಮುಖ್ಯ ಅಂಶವನ್ನು ಬಿಟ್ಟರೆ ಉಳಿದ ಅಂಶಗಳಲ್ಲಿ ಸಾಮಾನ್ಯತಃ ಮೂವರೂ ಏಕರೂಪವಾದ ಅಭಿಪ್ರಾಯವನ್ನೆ ವ್ಯಕ್ತಪಡಿಸಿದ್ದಾರೆ. ಸೂಕ್ಷ್ಮವಾದ ಅಭಿಪ್ರಾಯ ಭೇದಗಳು ಮೂರೂ ಅವತರಣಿಕೆಗಳನ್ನು ಜತೆಯಾಗಿ ಪರಿಶೀಲಿಸುವವರಿಗೆ ಸ್ಪಷ್ಟವಾಗಬಹುದು.

ಇಷ್ಟಂತು ಸ್ಪಷ್ಟ: ಭಗವದ್‌ಗೀತೆಯ ಸಂದೇಶವನ್ನು ಮೊದಲು ಅರ್ಜುನನಿಗೆ ನೀಡಿದವನು ಕೃಷ್ಣ. ಆದರೆ 'ಭಗವದ್‌ಗೀತೆ'ಯನ್ನು ರಚಿಸಿದವನು ಕೃಷ್ಣನಲ್ಲ. ವೇದವ್ಯಾಸರು. ಒಂದು ಗ್ರಂಥದ ಮಹತ್ವಕ್ಕೆ ಅದನ್ನು ಮೂಲತಃ ಹೇಳಿದವರಿಗಿಂತ ಅದನ್ನು ಕೃತಿಯಾಗಿ ಪೋಣಿಸಿದವರ ಪಾತ್ರ ಮುಖ್ಯವಾದದ್ದು. ಗ್ರಂಥಕಾರ ಯಶಸ್ವಿಯಾಗಿ ಆ ತತ್ವಗಳನ್ನು ತನ್ನ ಕೃತಿಗಳಲ್ಲಿ ಮೂಡಿಸಿದ್ದಾನೆಯೆ ಎನ್ನುವುದು ಗ್ರಂಥದ ಅಧ್ಯಯನದಲ್ಲಿ ಮಹತ್ವದ ಮಾತಾಗುತ್ತದೆ. ಅದಕ್ಕಾಗಿ ಆಚಾರ್ಯ ಮಧ್ವರು ಹಿಂದಿನ ಭಾಷ್ಯಕಾರರ ಜಾಡನ್ನು ತೊರೆದು ವ್ಯಾಸಾವತಾರದ ಪೀಠಿಕೆಯನ್ನು ರಚಿಸಿದರು.

ಈ ಮೂರು ಭಾಷ್ಯಗಳ ಪೀಠಿಕೆಯ ಮನನದ ಹಿನ್ನೆಲೆಯಲ್ಲಿ ನಾವು ಗೀತೆಯ ಪ್ರಥಮಾಧ್ಯಾಯಕ್ಕೆ ಪ್ರವೇಶಿಸೋಣ.

ವಾಸ್ತವವಾಗಿ ಪ್ರಥಮಾಧ್ಯಾಯಕ್ಕೆ ಯಾವ ಭಾಷ್ಯಕಾರರೂ ಟೀಕೆ ಬರೆದಿಲ್ಲ. ಗೀತೆಯಲ್ಲಿ ಇದು ಮಹತ್ತ್ವದ ಭಾಗವಲ್ಲ ಎಂದು ಅದರ ಅರ್ಥವಲ್ಲ. ಅವರು ಗೀತೆಯಲ್ಲಿ ಶ್ರೀಕೃಷ್ಣನ ಉಪದೇಶದ ಭಾಗಕ್ಕೆಯೆ ತಮ್ಮ ಗಮನವನ್ನು ಕೇಂದ್ರೀಕರಿಸಿದರು. ಅದಕ್ಕೆ ಪೀಠಿಕೆಯಾಗಿ ಮೊದಲನೆಯ ಅಧ್ಯಾಯ ಬಂದಿದೆ. ಇದು ಪಂಚಾಂಗ. ಮುಂದಿನದು ಸೌಧ.

ಮೊದಲ ಅಧ್ಯಾಯದ ಅರ್ಥ ವಿವರಣೆಯಲ್ಲಿ ಮತತ್ರಯಗಳಲ್ಲಿ ಹೆಚ್ಚಿನ ವ್ಯತ್ಯಾಸವೇನೂ ಇರದ್ದರಿಂದ ಅದರ ಸಾಮಾನ್ಯ ಅರ್ಥವನ್ನು ಕೆಳಗೆ ಕೊಡಲಾಗಿದೆ. ಅಭಿಪ್ರಾಯ ಭೇದವಿದ್ದೆಡೆ ಮಾತ್ರವೆ ಅದನ್ನು ಪ್ರತ್ಯೇಕವಾಗಿ ಉಲ್ಲೇಖಿಸಲಾಗಿದೆ.

ಕೌರವ-ಪಾಂಡವರ ಯುದ್ಧ ಪ್ರಾರಂಭವಾಗಿದೆ. ಹಲವು ದಿನಗಳ ಯುದ್ಧವೂ

ನಡೆದುಹೋಗಿದೆ. ಕುರುಕ್ಷೇತ್ರದಲ್ಲಿ ನಡೆದ ಯುದ್ಧ ಹಸ್ತಿನಪುರದಲ್ಲಿ ಕೂತ ಕುರುಡ ಧೃತರಾಷ್ಟ್ರನಿಗೆ ಹೇಗೆ ತಿಳಿಯಬೇಕು. ಅವನು ತನ್ನ ಮಕ್ಕಳ ಭವಿಷ್ಯವನ್ನು ತಿಳಿಯಲು ಕಾತರನಾಗಿ ಕಾದು ಕುಳಿತಿದ್ದಾನೆ. ಆಗ ಯುದ್ಧರಂಗದತ್ತಣಿಂದ ಸಂಜಯ ಮರಳಿ ಬಂದ. ಧೃತರಾಷ್ಟ್ರನಿಗೆ ತನ್ನ ಮಕ್ಕಳ ದುರಂತದ ಕಥೆಯನ್ನು ತಿಳಿಸಲೆಂದೇ ವೇದ ವ್ಯಾಸರಿಂದ ನಿಯುಕ್ತನಾದ ವ್ಯಕ್ತಿ ಸಂಜಯ. ಅದಕ್ಕಾಗಿ ಅವನು ಯುದ್ಧರಂಗಕ್ಕೆ ತೆರಳಿ ಕಂಡು-ಕೇಳಿ ಬರಬೇಕಾಗಿಯೂ ಇಲ್ಲ. ಅವನಿಗೆ ಇದಕ್ಕಾಗಿಯೆ ವೇದವ್ಯಾಸ ರಿಂದ ದೂರಶ್ರವಣ ಮತ್ತು ದೂರದರ್ಶನ ಶಕ್ತಿ ಪ್ರಾಪ್ತವಾಗಿತ್ತು. ಅವನು ಹಸ್ತಿನ ಪುರದ ರಾಜಭವನದಲ್ಲಿ ಧೃತರಾಷ್ಟ್ರನ ಬಳಿಯಲ್ಲಿ ಕುಳಿತೇ ಕುರುಕ್ಷೇತ್ರದಲ್ಲಿ ನಡೆಯು ತ್ತಿರುವ ಒಂದೊಂದು ಸಂಗತಿಯನ್ನು ಅಂತಶ್ಚಕ್ಷುವಿನಿಂದ ಕಾಣಬಲ್ಲವನಾಗಿದ್ದ; ಕೇಳ ಬಲ್ಲವನಾಗಿದ್ದ. ಇದು ಧೃತರಾಷ್ಟ್ರನಿಗೂ ಗೊತ್ತು.

ಅದಕೆಂದೆ ಅವನು, ಸಂಜಯ ಬಂದ ಸುದ್ದಿ ತಿಳಿದಾಗ ಈ ಬಾಲ್ಯಸ್ನೇಹಿತ ನನ್ನು ಬಳಿ ಕರೆದು ತನ್ನ ಕುತೂಹಲವನ್ನು ತೋಡಿಕೊಂಡ:

ಧೃತರಾಷ್ಟ್ರ ಉವಾಚ:

**ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾಃ ಯುಯುತ್ಸವಃ ।**
**ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ॥ ೧ ॥**

ಧೃತರಾಷ್ಟ್ರ ಹೇಳಿದ: ಓ ಸಂಜಯ, ಧರ್ಮದ ತಾಣವಾದ ಕುರುಕ್ಷೇತ್ರದಲ್ಲಿ ಯುದ್ಧ ಬಯಸಿ ಎದುರುಬದುರಾದ ನನ್ನ ಮಕ್ಕಳು ಮತ್ತು ಪಾಂಡವರು ಏನು ಮಾಡಿದರು?

ಕುರುಕ್ಷೇತ್ರ ಈ ವಂಶದ ಹಿರಿಯನಾದ ಕುರುರಾಜ ನಿರ್ಮಿಸಿದ ತಾಣ. ಅವ ನಿಂದಲೆ ಈ ವಂಶಕ್ಕೆ ಕುರುವಂಶವೆಂದು ಹೆಸರಾಯಿತು.

ಕುರುವಿಗಿಂತಲೂ ಮೊದಲೆ ಅದು ಪುಣ್ಯಕ್ಷೇತ್ರವಾಗಿತ್ತು-ಪರಶುರಾಮನ ಕಾಲ ದಿಂದಲೂ. ಅದರ ಸುತ್ತಲು ಅವನು ನಿರ್ಮಿಸಿದ ಐದು ಕೆರೆಗಳಿಂದಾಗಿ ಅದು ಯುಗಾಂತರದಿಂದಲು ಧರ್ಮಕ್ಷೇತ್ರ ಎಂದು ಖ್ಯಾತವಾಗಿತ್ತು. ಆ ಕೆರೆಗಳು ಪುಣ್ಯ ತೀರ್ಥಗಳಾಗಿದ್ದವು. ಅದಕೆಂದೆ ಕುರುಕ್ಷೇತ್ರದ ಪುರಾತನ ಹೆಸರು ಸಮಂತ ಪಂಚಕ. ಕುರುರಾಜ ಅದನ್ನು ಊರ್ಜಿತಗೊಳಿಸಿದ ಮೇಲೆ ಅದು ಕುರುಕ್ಷೇತ್ರವಾಯಿತು.

ಸಂಜಯನನ್ನು ಪ್ರಶ್ನಿಸುವಾಗ ಧೃತರಾಷ್ಟ್ರನ ಬಗೆಯಲ್ಲಿ ಈ ಎರಡೂ ಐತಿ ಹಾಸಿಕ ಅಂಶಗಳು ತಾಕಲಾಟ ನಡೆಸಿದವು.

ಇದು ಪರಶುರಾಮ ನಿರ್ಮಿತವಾದ ಧರ್ಮಕ್ಷೇತ್ರ. ನನ್ನ ಮಕ್ಕಳೋ ಅಧರ್ಮದ ಬೆನ್ನು ಕಟ್ಟಿ ಛಲದಿಂದ ಕದನಕ್ಕಿಳಿದವರು. ಅವರ ಅಧರ್ಮಕ್ಕೆ ಈ ಧರ್ಮ ಕ್ಷೇತ್ರದಲ್ಲಿ ಗೆಲುವಾದೀತೆ?

ಒಡನೆಯೆ ಅವನ ಒಳಬಗೆಯ ಇನ್ನೊಂದು ಮುಖ ಅವನನ್ನು ಸಂತೈಸುತ್ತದೆ. ನೆನಪಿಡು, ಇದು ಕುರುಕ್ಷೇತ್ರ ಕೂಡ ಹೌದು, ಕುರುವಂಶದ ನಿಜವಾದ ಉತ್ತರಾದಿಕಾರಿಗಳು ನಿನ್ನ ಮಕ್ಕಳು. ಅದಕೆಂದೆ ಅವರನ್ನು ಮಾತ್ರವೆ ಜನ ಕೌರವರೆಂದು ಕರೆಯುತ್ತಾರೆ. ಪಾಂಡವರು ಕುರುವಂಶದ ಮಕ್ಕಳೇ ಆದರೂ ಅವರು 'ಕೌರವ'ರಲ್ಲ. ಅವರದು ಕುರುವಂಶದ ರೇತಸ್ಸಲ್ಲ. ಅವರು ಮೂಲತಃ ಪಾಂಡುಪುತ್ರರಲ್ಲ; ದೇವಪುತ್ರರು. ಅದರಿಂದ ಕುರುಕ್ಷೇತ್ರ ಕೌರವರ ಕ್ಷೇತ್ರ. ಅಲ್ಲಿ ಕೌರವರಿಗೇ ಜಯ ಸಿಗಬೇಕು. [ನಿಜವಾಗಿ ನೋಡಿದರೆ ಧೃತರಾಷ್ಟ್ರನದೂ ಕುರುವಂಶದ ತಳಿಯಲ್ಲ. ಅವನೂ ವೇದವ್ಯಾಸರಿಂದ ಜನಿಸಿದವನೆ. ಆದರೆ ಅವನನ್ನೂ ಅವನ ಮಕ್ಕಳನ್ನೂ ಕೌರವ ವಂಶದವರೆಂದು ಸಮಾಜ ಅಂಗೀಕರಿಸಿಬಿಟ್ಟಿದೆ. ಆದ್ದರಿಂದ ಆ ಬಗ್ಗೆ ಅವನು ತಲೆಕೆಡಿಸಿಕೊಳ್ಳಬೇಕಾದ ಕಾರಣವಿಲ್ಲ.]

ಅವನಿಗೆ, ಏನಾದರೂ ತನ್ನ ಮಕ್ಕಳೇ ಗೆಲ್ಲಬೇಕು ಎಂಬ ಆಸೆ ಇತ್ತು. ಮಕ್ಕಳ ಮೋಹದಿಂದ ಅವನು ಒಳಗೂ ಕುರುಡನಾಗಿದ್ದ. ಮುಂದಿನ ಮಾತಿನಿಂದ ಈ ಭಾವ ಸ್ಪಷ್ಟ: ಮಾಮಕಾಃ ಪಾಂಡವಾಶ್ಚೈವ – ನನ್ನವರು ಮತ್ತು ಪಾಂಡವರು.

ಕೌರವರನ್ನು ನನ್ನ ಮಕ್ಕಳು, ನನ್ನವರು ಎನ್ನುವ ಅವನ ಮಾತಿನಲ್ಲಿ ಸ್ವಪಕ್ಷಪಾತ ಢಾಳಾಗಿ ಹೊಡೆಯುತ್ತಿದೆ. ಅವನಿಗೆ ತನ್ನ ಖಾಸಾ ತಮ್ಮನ ಮಕ್ಕಳಾದ ಪಾಂಡವರು ತನ್ನವರಾಗಿ ಕಾಣಿಸಲೇ ಇಲ್ಲ. ತೀರ ಪರಕೀಯರಾಗಿ ಕಂಡರು. ನಿಜವಾಗಿಯೂದರೆ 'ಹೋರಾಟಕ್ಕಿಳಿದ ನಮ್ಮ ಹುಡುಗರು ಏನು ಮಾಡಿಕೊಂಡರು?' ಎಂದಷ್ಟೇ ಕೇಳಬೇಕಿತ್ತು. 'ನಮ್ಮ ಹುಡುಗರು ಮತ್ತು ಪಾಂಡವರು' ಎನ್ನುವ ಮಾತು ಅವನ ಮುಚ್ಚಿಡಲಾಗದ ಸ್ವಾರ್ಥದ ಅಭಿವ್ಯಕ್ತಿಯಾಗಿ ಬಂತು. ಆದಕೆಂದೆ ''ಮಾಮಕಾಃ ಕಿಮಕುರ್ವತ'' ಎನ್ನುವ ಬದಲು ''ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ'' ಎಂದ! ಧೃತರಾಷ್ಟ್ರನ ಪುತ್ರ ಮೋಹಕ್ಕೆ ಮದ್ದೇ ಇಲ್ಲ.

ಅವರ ಜತೆಗೆ 'ಪಾಂಡವಾ ಏವ' ಪಾಂಡವರು ಮಾತ್ರವೆ; ಅವರ ಕಡೆಗೆ ಹೆಚ್ಚಿನ ವೀರರು ಯಾರೂ ಇಲ್ಲ; ಕೆಲವರು ಅನುಬಂಧಿಗಳು ಮಾತ್ರ ಸೇರಿಕೊಂಡಿದ್ದಾರೆ ಎನ್ನುವ ಕುರುಡು ಆತ್ಮಸಮರ್ಥನೆ.

ಎಂಥ ಕೌರವರು? ಎಂಥ ಪಾಂಡವರು? ''ಸಮವೇತಾ ಯುಯುತ್ಸವಃ". ಎರಡೂ ಪಂಗಡದವರೂ ಒಂದೆಡೆ ಕಲೆತಿದ್ದಾರೆ: ಸಮವೇತಾಃ ।

ಪರಿಣಾಮ ಏನಾಯಿತು: ಕಿಮಕುರ್ವತ. ಇಬ್ಬರಲ್ಲಿ ಯಾರು ಏನು ಮಾಡಿದರು. ಯಾರು ಯಾರನ್ನು ಕೊಂದರು? ಯಾರು ಗೆದ್ದರು? ಯಾರು ಸೋತರು? ಎಲ್ಲವನ್ನೂ ವಿವರವಾಗಿ ಹೇಳು. (ಮುಂದುವರಿಯುವುದು)

# ಭಗವದ್ ಗೀತೆ

— ಬನ್ನಂಜೆ ಗೋವಿಂದಾಚಾರ್ಯ

ಧೃತರಾಷ್ಟ್ರನ ಪ್ರಶ್ನೆಯ ಜೊತೆಗೆ ಭಗವದ್ಗೀತೆಯ ಪ್ರಾರಂಭ. 'ಕಿಮಕುರ್ವತ ಸಂಜಯ' – 'ಯುದ್ಧಕ್ಕೆ ಸಿದ್ಧರಾಗಿ ಮುಖಾಮುಖಿಯಾಗಿ ನಿಂತ ಪಾಂಡವರು ಮತ್ತು ನನ್ನ ಮಕ್ಕಳು ಏನು ಮಾಡಿದರು' ಎನ್ನುವ ಧೃತರಾಷ್ಟ್ರನ ಪ್ರಶ್ನೆಯ ಭಾವ ಸ್ಫುಟವಾಗ ಬೇಕಾಗಿದ್ದರೆ, ಭಗವದ್ಗೀತೆಯ ಮೊದಲಿನ ಭಾರತದ ಭಾಗವನ್ನು ನಾವು ಪರಿಶೀಲಿಸ ಬೇಕು.

ಭಗವದ್ಗೀತೆ ಭಾರತದ ಭೀಷ್ಮಪರ್ವದಲ್ಲಿ ಬಂದಿದೆ. ಗೀತೆಗಿಂತ ಮೊದಲು ಇಪ್ಪತ್ತ ನಾಲ್ಕು ಅಧ್ಯಾಯಗಳು ಸಂದು ಇಪ್ಪತ್ತೈದರಿಂದ ನಲವತ್ತೆರಡನೇ ಅಧ್ಯಾಯದ ತನಕ ಭಗವದ್ಗೀತೆಯ ಭಾಗ.

ಮೊದಲಿನ ಈ ಇಪ್ಪತ್ತನಾಲ್ಕು ಅಧ್ಯಾಯಗಳಲ್ಲಿ ಏನು ಬಂದಿದೆ ಎನ್ನುವುದನ್ನು ಗಮನಿಸಿದರೆ ಧೃತರಾಷ್ಟ್ರನ ಈ ಪ್ರಶ್ನೆಯ ಹಿನ್ನೆಲೆ ನಮಗೆ ಸ್ಫುಟವಾಗುತ್ತದೆ.

ಭೀಷ್ಮಪರ್ವದ ಪ್ರಾರಂಭದಲ್ಲಿ ಬಂದ ವಿಷಯ ಇಷ್ಟು: ಎರಡು ಕಡೆಯವರೂ ಸೇನೆಯನ್ನು ಸಂಗ್ರಹಿಸಿದ್ದಾರೆ. ಒಂದು ಕಡೆ ಹನ್ನೊಂದು ಅಕ್ಷೋಹಿಣಿ, ಇನ್ನೊಂದು ಕಡೆ ಏಳು ಅಕ್ಷೋಹಿಣಿ. ಆಗ ವೇದವ್ಯಾಸರು ಧೃತರಾಷ್ಟ್ರನ ಬಳಿ ಬಂದು ಅವನನ್ನು ಎಚ್ಚರಿಸುತ್ತಾರೆ; "ಘೋರವಾದ ಯುದ್ಧ ನಡೆಯಲಿದೆ. ಅದರ ಪರಿಣಾಮ ಸರ್ವನಾಶ. ನಿನ್ನ ಮಕ್ಕಳಿಂದಾಗಿ ನಡೆಯುವ ಈ ಸರ್ವನಾಶವನ್ನು ನಿನಗೆ ಕಾಣಬೇಕೆಂದಿದ್ದರೆ ನಾನು ನಿನಗೆ ಕಣ್ಣು ಕೊಡಬಲ್ಲೆ. ನಿನ್ನ ಅಚಾತುರ್ಯದ ಫಲವನ್ನು ನೀನೇ ಕಣ್ಣಾರೆ ನೋಡು."

ಧೃತರಾಷ್ಟ್ರ ಕಾಣ ಬಯಸಲಿಲ್ಲ. ಆದರೆ ಕೇಳ ಬಯಸಿದ. ವೇದವ್ಯಾಸರು ಧೃತರಾಷ್ಟ್ರನ ಬದಲು ಸಂಜಯನಿಗೆ ದಿವ್ಯ ದೃಷ್ಟಿಯನ್ನಿತ್ತರು. ಪರಿಣಾಮವಾಗಿ ಅವ ನಿಗೆ ದೂರದರ್ಶನ ಮತ್ತು ದೂರಶ್ರವಣಶಕ್ತಿ ಸಿದ್ಧಿಸಿತು. ಅವನು ದಿವ್ಯದೃಷ್ಟಿಯಲ್ಲಿ ಕಂಡದ್ದನ್ನು ಧೃತರಾಷ್ಟ್ರನಿಗೆ ವಿವರಿಸಿದ

ವೇದವ್ಯಾಸರು ಮತ್ತೆ ಧೃತರಾಷ್ಟ್ರನನ್ನು ಎಚ್ಚರಿಸಿದರು. ''ಈ ಯುದ್ಧವನ್ನು ಆಗಗೊಡದಂತೆ ತಡೆಯುವುದು ರಾಜನಾದ ನಿನ್ನ ಕರ್ತವ್ಯ. ಮಕ್ಕಳಿಗೆ ತಿಳಿಹೇಳು, ಜನಾಂಗ ಹತ್ಯೆಗೆ ತಡೆಹಾಕು.''

ಕುರುಡನಾದ ಧೃತರಾಷ್ಟ್ರ ಈ ಉಪದೇಶಕ್ಕೆ ಕಿವುಡನೂ ಆದ. ಅವನ ಸ್ವಾರ್ಥ ಮತ್ತು ಪುತ್ರಮೋಹ ಎಲ್ಲವನ್ನೂ ಮೀರಿನಿಂತಿತು. "ಆದದ್ದಾಗಲಿ ನಾನು ಮಕ್ಕಳನ್ನು ತಡೆಯಲಾರೆ" ಎಂದುಬಿಟ್ಟ.

ವ್ಯಾಸರು ತಪೋವನಕ್ಕೆ ತೆರಳಿದರು. ಸಂಜಯ ಭೂಮಂಡಲದ ವಿಸ್ತಾರವನ್ನೆಲ್ಲಾ ತಿಳಿಸಿ ಯಾವ ಕಡೆಯಿಂದ ಎಷ್ಟು ಸೇನೆ ಯುದ್ಧಕ್ಕಾಗಿ ಕುರುಕ್ಷೇತ್ರದಲ್ಲಿ ನೆರದಿದೆ ಎನ್ನುವ

ವಿವರವನ್ನು ಧೃತರಾಷ್ಟ್ರನಿಗೆ ವರ್ಣಿಸಿದನು. ಯುದ್ಧ ಪ್ರಾರಂಭವಾದಾಗ ಕುತೂಹಲ ದಿಂದ ತಾನೂ ಕುರುಕ್ಷೇತ್ರಕ್ಕೆ ನಡೆದನು.

ಇತ್ತ ಧೃತರಾಷ್ಟ್ರ ಹಸ್ತಿನಾಪುರದಲ್ಲಿ ಯುದ್ಧದ ಸುದ್ದಿಗಾಗಿ ಮೈಯೆಲ್ಲಾ ಕಿವಿಯಾಗಿ ಕಾದು ಕುಳಿತ. ಯುದ್ಧಪ್ರಾರಂಭವಾಗಿ ಹತ್ತು ದಿನಗಳ ತನಕವೂ ಸಂಜಯ ಮರಳ ಲಿಲ್ಲ. ಹತ್ತನೇ ದಿವಸ ಭೀಷ್ಮಪಾತವಾಯಿತು. ಕೌರವರ ಮೊದಲ ಸೇನಾಪತಿ, ಕುರುಕುಲದ ಪಿತಾಮಹ, ಭೀಷ್ಮಾಚಾರ್ಯರು ಹೀಗೆ ಕಣೆ ಮಂಚದಲ್ಲಿ ಮಲಗಿದ್ದನ್ನು ಕಂಡ ಸಂಜಯ ಹಸ್ತಿನಪುರಕ್ಕೆ ಮರಳಿದ. ಅರಮನೆಯಲ್ಲಿ ಸುದ್ದಿಗಾಗಿ ಕಾದಿದ್ದ ಧೃತ ರಾಷ್ಟ್ರನಿಗೆ ಭೀಷ್ಮಪಾತದ ದುರಂತದ ಸುದ್ದಿಯನ್ನು ಮುಟ್ಟಿಸಿದ.

ಸೋಲರಿಯದ ಭೀಷ್ಮರಂತಹ ಕುರುವೃದ್ಧರ ಪಾಡೂ ಹೀಗಾದ ಮೇಲೆ ತನ್ನ ಮಕ್ಕಳ ಗೆಲುವಿನ ಬಗ್ಗೆ ಧೃತರಾಷ್ಟ್ರನ ಮನದಲ್ಲಿ ಭರವಸೆ ಕುಸಿಯತೊಡಗಿತು. ಆದರೆ ಇದು ಹೇಗೆ ಸಾಧ್ಯ? ಭೀಷ್ಮರಂಥವರೂ ಸೋಲುವುದೆಂದರೇನು? ಈ ಹತ್ತು ದಿನ ಗಳಲ್ಲಿ ನಡೆದದ್ದಾದರೂ ಏನು? ಒಂದೊಂದು ದಿನವೂ ಯಾರು ಗೆದ್ದರು? ಯಾರು ಸೋತರು? ಯುದ್ಧ ಹೇಗೆ ಮೊದಲಾಯಿತು? ಎಲ್ಲವನ್ನೂ ಕೂಲಂಕಷವಾಗಿ ತಿಳಿಯುವ ಬಯಕೆ ಧೃತರಾಷ್ಟ್ರನಿಗೆ. ಈ ಹಿನ್ನಲೆಯಲ್ಲಿ ಧೃತರಾಷ್ಟ್ರನ ಈ ಪ್ರಶ್ನೆ ಬಂದಿದೆ;

**"ಕಿಮಕುರ್ವತ ಸಂಜಯ":**

ಇದು ಬರಿಯ ಯುದ್ಧದ ಜಿಜ್ಞಾಸೆಯಲ್ಲ. ಯುದ್ಧ ಪ್ರಾರಂಭವಾಗುವ ಮುನ್ನ ಎರಡೂ ಕಡೆಯ ಹಿರಿಯರು ಏನು ಮಾಡಿದರು? ಹೇಗೆ ಯುದ್ಧ ಪ್ರಾರಂಭವಾಯಿತು? ಎನ್ನುವ ಮೂಲ ಪ್ರಶ್ನೆಯನ್ನು ಧೃತರಾಷ್ಟ್ರ ಸಂಜಯನ ಮುಂದಿಟ್ಟಿದ್ದಾನೆ. ಧೃತರಾಷ್ಟ್ರನ ಭಾವವನ್ನು ಅರಿತ ಸಂಜಯ ಅದಕ್ಕೆ ಅನುಗುಣವಾಗಿಯೇ ಯುದ್ಧದ ಪೂರ್ವಭಾವಿಯಾಗಿ ನಡೆದ ಗೀತೋಪದೇಶವನ್ನು ಹದಿನೆಂಟು ಅಧ್ಯಾಯಗಳಲ್ಲಿ ವಿವರಿಸಿ ಭೀಷ್ಮಪರ್ವದ ನಲವತ್ತಮೂರನೇ ಅಧ್ಯಾಯದಲ್ಲಿ ಧರ್ಮರಾಜನ ನಿಲುವನ್ನು ವಿವರಿಸಿ ಅನಂತರವೇ ಹೋರಾಟದ ಕತೆಯನ್ನು ಬಿತ್ತರಿಸುತ್ತಾನೆ. ಇಷ್ಟು ಹಿನ್ನಲೆಯನ್ನು ತಿಳಿದುಕೊಂಡು ನಾವು ಮುಂದಿನ ಶ್ಲೋಕಕ್ಕೆ ಹೋಗೋಣ.

**ಸಂಜಯ ಉವಾಚ:**

> **ದೃಷ್ಟ್ವಾ ತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ ।**
> **ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ॥ ೨ ॥**

ಸಂಜಯನು ಉತ್ತರಿಸಿದನು: "ಯುದ್ಧಾರಂಭದ ಸಮಯದಲ್ಲಿ ವ್ಯೂಹಕಟ್ಟಿ ಸಜ್ಜಾಗಿ ನಿಂತ ಪಾಂಡವರ ಸೇನೆಯನ್ನು ಕಂಡದ್ದೇ (ಕಸಿವಿಸಿಗೊಂಡ) ದುರ್ಯೋಧನ ಆಚಾರ್ಯ ದ್ರೋಣರ ಬಳಿ ಬಂದು ರಾಜತ್ವದ ಠೀವಿಯಿಂದ ಮುಂದಿನ ಮಾತನ್ನು ಹೇಳಿದನು."

ಈ ಪದ್ಯದಲ್ಲಿ ನಾವು ಗಮನಿಸಬೇಕಾದ ಕೆಲವು ಮಹತ್ವದ ಅಂಶಗಳಿವೆ. ದುರ್ಯೋಧನ ಮೊದಲು ಅತಿಯಾದ ಆತ್ಮವಿಶ್ವಾಸದಿಂದ ಯುದ್ಧಕ್ಕೆ ತೊಡಗಿದ್ದ. ಹನ್ನೊಂದು ಅಕ್ಷೋಹಿಣಿ ಸೇನೆ ತಮ್ಮ ಕಡೆಗಿದೆ. ಜಗತ್ತಿನ ಪ್ರಮುಖ ವೀರರೆಲ್ಲಾ ತಮ್ಮ

ಕಡೆಗಿದ್ದಾರೆ. ದ್ರೋಣ ಭೀಷ್ಮರಂಥವರು ತಮ್ಮ ಕಡೆಗಿದ್ದಾರೆ. ಪಾಂಡವರ ಕಡೆ ಯಲ್ಲೊ ಬರಿಯ ಏಳು ಅಕ್ಷೋಹಿಣಿ ಸೇನೆ. ಅದರಲ್ಲೂ ಹೆಚ್ಚಿನವರು ಪಾಂಡವರ ಅನುಬಂಧಿಗಳು. ದಾಕ್ಷಿಣ್ಯಕ್ಕಾಗಿ ಅವರ ಕಡೆ ಸೇರಿದವರು. ಆದ್ದರಿಂದ ಜಯ ತಮಗೆ ಖಚಿತ. 'ಪಾಣೌ ಫಲಮಿವಾಹಿತಂ' ಈ ಸಂಗತಿ ಅಂಗೈಯ ನೆಲ್ಲಿಕಾಯಷ್ಟು ಸ್ಪಷ್ಟ ಎಂದು ಅವನು ತಂದೆಯ ಬಳಿಯಲ್ಲೂ ವಾದಿಸಿದ್ದ.

ಇಷ್ಟು ಆತ್ಮವಿಶ್ವಾಸದಿಂದ ಬಂದ ದುರ್ಯೋಧನ ಪಾಂಡವರ ಸಜ್ಜಾದ ಸೇನೆಯ ಒಗ್ಗಟ್ಟಿನ ಸನ್ನಾಹವನ್ನು ಕಂಡು ಒಮ್ಮೆಲೆ ಕುಸಿದ. ಸಂಖ್ಯೆಗಿಂತ ಸಂಘಟನೆ ಮುಖ್ಯ; ಪಾಂಡವರ ಸಂಘಟನೆಯ ಮುಂದೆ ತಮ್ಮ ಸಂಖ್ಯಾಬಲ ಗೆದೆಯಲಾರದೇನೋ ಎನ್ನುವ ಭಯ ಅವನನ್ನಾವರಿಸಿತು.

ಈ ಎಲ್ಲ ಭಾವನೆಗಳನ್ನೂ 'ದೃಷ್ಟ್ವಾ ತು' ಎನ್ನುವ ಎರಡು ಪದಗಳಲ್ಲಿ ತುಂಬ ಲಾಗಿದೆ. 'ದೃಷ್ಟ್ವಾ ತು' ಎಂದರೆ ನೋಡಿದ ಮಾತ್ರಕ್ಕೆಯೇ. ಅರ್ಥಾತ್ ಮೊದಲು ಪುಸಿ ಭರವಸೆಯಿಂದ ಬಂದ ದುರ್ಯೋಧನ ಪಾಂಡವರ ಸೇನಾ ಸನ್ನಾಹವನ್ನು ನೋಡಿದ ಮಾತ್ರಕ್ಕೆಯೇ ಧೈರ್ಯಕಳೆದುಕೊಂಡು, ಕಂಗೆಟ್ಟು, ಆಚಾರ್ಯ ದ್ರೋಣರ ಬಳಿಗೆ ಧಾವಿಸಿದ.

ಇಲ್ಲಿ ದುರ್ಯೋಧನನ ಸಂಶಯ ಪ್ರಕೃತಿ ಇನ್ನಷ್ಟು ಬೆಳಕಿಗೆ ಬಂದಿದೆ. ಅವನು ನಿಜವಾಗಿ ಸೇನಾಪತಿ ಭೀಷ್ಮರ ಬಳಿ ಹೋಗಬೇಕಿತ್ತು. ಆದರೆ ಹಾಗೆ ಮಾಡಲಿಲ್ಲ. ದ್ರೋಣರ ಬಳಿ ಬಂದ. ಕಾರಣ ಸ್ಪಷ್ಟ: ಅವನಿಗೆ ಭೀಷ್ಮರ ಮೇಲೂ ಸಂಶಯ. ಇವರು ತನ್ನ ಸೇನಾಪತಿಗಳಾದರೂ ಅಂತರಂಗದಲ್ಲಿ ಪಾಂಡವರ ಪಕ್ಷಪಾತಿಗಳು. ಇವರನ್ನು ನಾಯಕ ಸ್ಥಾನದಲ್ಲಿಟ್ಟು ತಾನು ಯುದ್ಧವನ್ನು ಗೆಲ್ಲಬಲ್ಲೆನೇ? ಸುಪ್ತ ಪ್ರಜ್ಞೆಯಲ್ಲಿದ್ದ ಈ ಹುಳುಕು ಪಾಂಡವರ ಸಜ್ಜಾದ ಸೇನೆಯನ್ನು ಕಂಡಾಗ ಜಾಗೃತವಾಯಿತು. ಅದಕ್ಕೆಂದೇ ಅವನು ಭೀಷ್ಮರ ಬಳಿ ಹೋಗದೇ ದ್ರೋಣರ ಬಳಿ ಬಂದ. ದ್ರೋಣರನ್ನು ಎತ್ತಿ ಕಟ್ಟಿ ತನ್ನ ಸ್ವಾರ್ಥಸಾಧನೆಯ ಕುಹಕವನ್ನು ಹೂಡಿದ.

ಕೊನೆಯ ಚರಣ ಧುರ್ಯೋಧನನ ಮನಃಸ್ಥಿತಿಗೆ ಇನ್ನಷ್ಟು ಬೆಳಕನ್ನು ಚೆಲ್ಲು ತ್ತದೆ. ರಾಜಾ ವಚನಮಬ್ರವೀತ್. ಅವನು ಆಚಾರ್ಯರ ಬಳಿಗೆ ಶಿಷ್ಯನಾಗಿ ಬರಲಿಲ್ಲ. ರಾಜನ ಠೀವಿಯಿಂದ ಬಂದ.

ವಸ್ತುತಃ ದುರ್ಯೋಧನ ರಾಜನಲ್ಲ. ರಾಜನಾಗುವ ಕನಸು ಕಂಡವ. ಆ ಕನಸಿನ ಗುಂಗಿನಲ್ಲೇ ಅವನು ಆಚಾರ್ಯ ದ್ರೋಣರ ಬಳಿ ಮಾತನಾಡುತ್ತಿದ್ದಾನೆ. "ನಾನು ಶಿಷ್ಯನಾಗಿ ನಿಮ್ಮ ಬಳಿ ಪ್ರಾರ್ಥಿಸುತ್ತಿಲ್ಲ. ರಾಜನಾಗಿ ಆಜ್ಞಾಪಿಸುತ್ತಿದ್ದೇನೆ. ನೀವು ನನ್ನ ಪ್ರಜೆಗಳು. ನನ್ನ ಅನ್ನಕ್ಕೆ ಬಿದ್ದವರು. ನನ್ನ ಆಜ್ಞೆಯನ್ನು ಪಾಲಿಸು ವುದು ನಿಮ್ಮ ಕರ್ತವ್ಯ." ಎನ್ನುವ ಅವನ ಒಳಬಗೆಯ ಧಿಮಾಕಿಗೆ ಈ ನುಡಿ ಕನ್ನಡಿ ಹಿಡಿಯುತ್ತದೆ. ಅವನ ಮುಂದಿನ ಮಾತುಗಳೆಲ್ಲಾ ಅವನ ಈ ಮನಸ್ಸಿನ ಕೊಳೆಯ ಪ್ರತಿಫಲನಗಳೇ ಆಗಿವೆ. ✱

# ಭಗವದ್ಗೀತೆ

— ಬನ್ನಂಜೆ ಗೋವಿಂದಾಚಾರ್ಯ

ಧೃತರಾಷ್ಟ್ರನ ಮನಃಸ್ಥಿತಿ ಮತ್ತು ಪುತ್ರ ವ್ಯಾಮೋಹದ ಸ್ವಾರ್ಥದಿಂದ ಕುರುಃಡಾದ ಅವನ ವ್ಯಕ್ತಿತ್ವವನ್ನು ಸಮಗ್ರವಾಗಿ ಚಿತ್ರಿಸುವ ಗೀತೆಯ ಪ್ರಥಮ ಶ್ಲೋಕವನ್ನು ನೋಡಿದೆವು. ಅನಂತರದ ಶ್ಲೋಕ ದುರ್ಯೋಧನನ ಮನಃಸ್ಥಿತಿಯನ್ನು ನಮ್ಮ ಮುಂದೆ ತೆರೆದಿಡುತ್ತದೆ.

ಹೀಗೆ ಸಂಶಯಗ್ರಸ್ತನಾದ ದುರ್ಯೋಧನನ ವಿಕ್ಷಿಪ್ತ ಮನಃಸ್ಥಿತಿಯನ್ನು ಮುಂದಿನ ಒಂಭತ್ತು ಶ್ಲೋಕಗಳು ವಿವರಿಸುತ್ತವೆ. ದುರ್ಯೋಧನನ ಮಾತುಗಳಿಂದಲೇ ಅವನ ಮನಸ್ಸಿನ ಹುಳುಕಿಗೆ ಕನ್ನಡಿ ಹಿಡಿಯುವ ಈ ಶ್ಲೋಕಗಳು ಗೀತೆಯ ಬೆಳವಣಿಗೆಗೆ ಬಲವಾದ ಪಂಚಾಂಗವನ್ನು ಕಟ್ಟುತ್ತವೆ. ಅದರಲ್ಲಿ ಮೊದಲನೆಯ ಶ್ಲೋಕ:—

**ಪಶ್ಯೈತಾಂ ಪಾಂಡುಪುತ್ರಾಣಾಮಾಚಾರ್ಯ ಮಹತೀಂ ಚಮೂಂ ।**
**ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ॥ ೩ ॥**

ಆಚಾರ್ಯ ದ್ರೋಣರೇ, ಪಾಂಡವರ ಈ ಮಹತ್ತಾದ ಸೇನಾ ಸನ್ನಾಹವನ್ನು ನೋಡಿರಿ. ನಿಮ್ಮ ನೆಚ್ಚಿನ ಶಿಷ್ಯನಾದ ಚಾಣಾಕ್ಷ ಧೃಷ್ಟದ್ಯುಮ್ನ ಇದನ್ನು ಸಜ್ಜುಗೊಳಿಸಿದ್ದಾನೆ.

ಈ ಪದ್ಯದ ಒಂದೊಂದು ಪದವೂ ದುರ್ಯೋಧನನ ಭಾವತುಮುಲವನ್ನು ಅರ್ಥಪೂರ್ಣವಾಗಿ ಚಿತ್ರಿಸುತ್ತದೆ. ದುರ್ಯೋಧನ ಪಾಂಡವರ ಸೇನೆಯನ್ನು 'ಮಹತೀಂ ಚಮೂಂ' ಎಂದು ಕರೆಯುತ್ತಾನೆ. ವಾಸ್ತವಿಕವಾಗಿ ಸಂಖ್ಯಾಬಲದಲ್ಲಿ ಕೌರವರ ಸೇನೆಯೇ ಮಹತ್ತಾದದ್ದು, ಪಾಂಡವರದ್ದಲ್ಲ. ಆದರೂ ಪಾಂಡವರ ಸೇನಾ ಸನ್ನಾಹದ ಅಚ್ಚುಕಟ್ಟನ್ನು, ವ್ಯವಸ್ಥಿತತೆಯನ್ನು ಕಂಡ ದುರ್ಯೋಧನನಿಗೆ ತನ್ನ ಹನ್ನೊಂದು ಅಕ್ಷೋಹಿಣಿಗಿಂತಲೂ ಪಾಂಡವರ ಏಳು ಅಕ್ಷೋಹಿಣಿಯೇ ಮಹತ್ತಾಗಿ ಕಾಣುತ್ತದೆ. ಇದು ಅವನ ಮನಸ್ಸಿನ ಗೊಂದಲಗೇಡಿತನಕ್ಕೆ ಹಿಡಿದ ಕೈಗನ್ನಡಿ. ಇನ್ನೊಂದು ಮಹತ್ವದ ವಿಶೇಷಣ 'ಏತಾಂ' ಎನ್ನುವುದು. ತೀರ ಸಮೀಪದಲ್ಲಿರುವಂತಹದು ಎಂದು ಈ ಪದದ ಅರ್ಥ. 'ಸಮೀಪತರವರ್ತಿ ಚೈತದೋ ರೂಪಮ್' ವಾಸ್ತವವಾಗಿ ದುರ್ಯೋಧನನ ಪಕ್ಕದಲ್ಲಿರುವಂತಹದು ತನ್ನ ಸೇನೆಯೇ ಹೊರತು ಪಾಂಡವರ ಸೇನೆಯಲ್ಲ. ಆದರೂ ಅವನಿಗೆ ಪಾಂಡವರ ಸೇನೆ ತನ್ನ ಬಳಿಗೇ ಬಂದು ಬಿಟ್ಟಿದೆ; ತೀರ ಸಮೀಪದಲ್ಲಿ ತನ್ನ ಪಕ್ಕದಲ್ಲೇ ಹೋರಾಟಕ್ಕೆ ಸಜ್ಜಾಗಿ ನಿಂತುಬಿಟ್ಟಿದೆ. ಎನ್ನುವ ಮನೋಭ್ರಮೆಯು ಕಾತರ ಈ ಪದದಿಂದ ವ್ಯಕ್ತವಾಗುತ್ತದೆ.

ಅವಕ್ಕೆಂದೇ ಅವನು ಆಚಾರ್ಯರನ್ನು ಎಚ್ಚರಿಸುತ್ತಾನೆ. 'ಪಶ್ಯ' ನೋಡಿ ಎಂದು. ಹೊಣೆಗಾರಿಕೆಯ ಸ್ಥಾನದಲ್ಲಿರುವ ಹಿರಿಯರಾದ ದ್ರೋಣರಂಥವರೂ ಇದನ್ನು ಗಮನಿಸದೆ ಹೊಣೆಗೇಡಿಗಳಾಗಿ ಕುಳಿತಿದ್ದಾಗ ತಾನು ಇದನ್ನು ಮೊದಲ ಬಾರಿ ಗಮನಿಸಿದೆ ಎನ್ನುವಂತಿದೆ ಅವನ ಉದ್ಗಾರ. "ಎಂತಹ ಅಪಾಯ ನಮ್ಮ ಮುಂದಿದೆ. ಏಕೆ ನೀವಾರೂ ಗಮನಿಸುತ್ತಿಲ್ಲ. ಕೊನೆಗೂ ನಾನೇ ಬಂದು ಹೇಳ ಬೇಕಾಯಿತೇ. ಇನ್ನಾದರೂ ಕಣ್ತೆರೆದು ನೋಡಿ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳಿ" ಎಂದು ಎಚ್ಚರಿಸುವಂತಿದೆ ಅವನ ಮಾತು.

ಅವನ ಈ ಒಳತುಮುಲಕ್ಕೆ ಈ ಕಾವ್ಯಧ್ವನಿಗೆ ಸುಂದರವಾದ ಪುಷ್ಟಿನೀಡುವ ಅಂಶ 'ಪಾಂಡು ಪುತ್ರಾಣಾಂ ಆಚಾರ್ಯ' ಎನ್ನುವ ಪದ ಸಂಯೋಜನೆ. ದುರ್ಯೋಧನನ ಒಳಬಗೆಯಲ್ಲಿ ತುಂಬಿರುವ ನಂಜೆಲ್ಲಾ, ಹುಳುಕೆಲ್ಲಾ ಈ ವಿಶಿಷ್ಟವಾದ ಪದರಚನೆ ಯಲ್ಲಿ ಪ್ರತಿಬಿಂಬಿತವಾಗಿದೆ. ವಾಸ್ತವಿಕ ಅನ್ವಯದಲ್ಲಿ 'ಪಾಂಡುಪುತ್ರಾಣಾಂ' ಎನ್ನುವ ಪದವು 'ಸೇನಾಂ' ಎನ್ನುವುದರ ಜೊತೆಗೆ ಹೊಂದಿಕೊಳ್ಳುವಂತಹದು. ಆದರೆ ಮಧ್ಯ ವಲ್ಲಿ ಸೇರಿಕೊಂಡ ಆಚಾರ್ಯಪದವು ಒಂದು ಹೊಸ ಧ್ವನಿಯ ಪ್ರಪಂಚವನ್ನೇ ಸೃಷ್ಟಿಸುತ್ತದೆ. "ನೀವು ನಮ್ಮ ಕಡೆಯಲ್ಲಿದ್ದರೂ ನಮ್ಮ ಸೇನೆಯ ಮುಖಂಡರಾಗಿ ದ್ದರೂ ಅಂತರಂಗದಲ್ಲಿ ನೀವು ಪಾಂಡವರ ಆಚಾರ್ಯರೇ ಆಗಿದ್ದೀರಿ. ಏನಿದ್ದರೂ ಅರ್ಜುನನು ನಿಮ್ಮ ಪ್ರೀತಿಯ ಶಿಷ್ಯನಲ್ಲವೆ? ಆದರಿಂದ ನೀವು ನಮ್ಮ ಜೊತೆಗಿದ್ದೂ ಮನಃಪೂರ್ತಿಯಾಗಿ ನಮ್ಮೊಡನೆ ಸಹಕರಿಸುತ್ತಿಲ್ಲ. ನೀವು ಈಗಲೂ ಕೌರವರ ಆಚಾರ್ಯರಾಗುವ ಬದಲು ಪಾಂಡವರ ಆಚಾರ್ಯರಾಗಿಯೇ ಉಳಿದಂತಿದೆ" ಎನ್ನು ವುದು ಈ ಮಾತಿನ ಹಿಂದಿರುವ ವ್ಯಂಗ್ಯ.

ಉತ್ತರಾರ್ಧದಲ್ಲಿ ಪಾಂಡವರ ಸೇನಾಪತಿಯ ಬಗ್ಗೆ ಉಲ್ಲೇಖ ಬಂದಿದೆ. ಪಾಂಡವರ ಸೇನಾಪತಿಯಾದ ಧೃಷ್ಟದ್ಯುಮ್ನನನ್ನು ಹೆಸರಿಸದೆ ಸಾಕೂತವಾದ ಮೂರು ವಿಶೇಷಣಗಳಿಂದ ಉಲ್ಲೇಖಿಸುತ್ತಾನೆ – ದ್ರುಪದಪುತ್ರೇಣ, ತವ ಶಿಷ್ಯೇಣ, ಧೀಮತಾ. 'ಪಾಂಡವರ ಸೇನೆಯನ್ನು ಅತ್ಯಂತ ಸಮರ್ಥವಾಗಿ ಸಜ್ಜುಗೊಳಿಸಿದ ಸೇನಾಪತಿ ಮೊದಲನೆಯದಾಗಿ ದ್ರುಪದನ ಮಗ. ಎರಡನೆಯದಾಗಿ ದ್ರೋಣಾ ಚಾರ್ಯರ ಶಿಷ್ಯ. ಮೂರನೆಯದಾಗಿ ಯುದ್ಧದ ತಂತ್ರಗಳನ್ನೆಲ್ಲಾ ಬಲ್ಲ ನಿಪುಣ ಚಾಣಾಕ್ಷ' ಈ ಮೂರು ವಿಶೇಷಣಗಳಿಂದ ದುರ್ಯೋಧನ ತನ್ನ ಅಂತರಂಗದ ಸಂಘರ್ಷವನ್ನು ಬಹಳ ಸ್ಫುಟವಾಗಿ ಹೊರಗೆಡಹುತ್ತಾನೆ.

ಅವನ ಭಯಕ್ಕೆ ಮೊದಲ ಕಾರಣ ಪಾಂಡವರ ಸೇನಾಪತಿ ದ್ರುಪದನ ಮಗ ಎನ್ನುವುದೇ ಆಗಿದೆ. ದ್ರೋಣರನ್ನು ಕೊಲ್ಲಬಲ್ಲಂತಹ ಮಗ ತನಗಾಗಬೇಕೆಂದು ಹಂಬಲಿಸಿ ಅದರ ಫಲವಾಗಿ ದ್ರುಪದ ಪಡೆದ ಅಗ್ನಿಪುತ್ರ ಧೃಷ್ಟದ್ಯುಮ್ನ. ಹೀಗೆ ದ್ರೋಣರನ್ನು ಕೊಲ್ಲಲೆಂದೇ ಹುಟ್ಟಿದ ಧೃಷ್ಟದ್ಯುಮ್ನ ಎದುರಾಗಡೆಯ ಸೇನಾನಿ ಯಾಗಿದ್ದಾನೆ. ಇದು ದುರ್ಯೋಧನನ ತಲೆಗೆಡಿಸಿದ ಮೊದಲನೆಯ ಸಂಗತಿ.

ಎರಡನೆಯ ಮಾತು ಅವನು ದ್ರೋಣಾಚಾರ್ಯರ ಶಿಷ್ಯ ಎನ್ನುವುದು. ದ್ರೋಣರಿಂದಲೇ ಶಸ್ತ್ರವಿದ್ಯೆಯನ್ನು ಕಲಿತು, ದ್ರೋಣರಿಗೆ ತಿರುಮಂತ್ರ ಹಾಕ ಹೊರಟಿರುವ ಈತನ ಬಗ್ಗೆ ತನ್ನಂತೆಯೇ ದ್ರೋಣರಿಗಾಗಲೀ ತನ್ನ ಪಕ್ಷದ ಇತರರಿಗಾಗಲೀ ಏಕೆ ಚಿಂತೆ ಇಲ್ಲ ಎನ್ನುವುದೇ ಅವನ ಮುಖ್ಯ ಚಿಂತೆ.

ಮೂರನೆಯ ಸಂಗತಿ ಆತ ತುಂಬಾ ಧೀಮಂತ, ಚಾಣಾಕ್ಷ ಎನ್ನುವುದು. ಆತ ಎಷ್ಟು ಧೀಮಂತಿಕೆಯಿಂದ ಯುದ್ಧದ ಭಾವಿಪರಿಣಾಮವನ್ನು ಗಮನಿಸಿ ಎಷ್ಟು ಚಾಣಾಕ್ಷತೆಯಿಂದ ಸೇನೆಯನ್ನು ಸಜ್ಜುಗೊಳಿಸಿದ್ದಾನೆ! ಇದನ್ನು ಗಮನಿಸಿದರೆ ತಮ್ಮ ಕಡೆಯಲ್ಲಿ ಇಂತಹ ಧೀಮಂತಿಕೆಯ ಬದಲು ದಿವ್ಯ ನಿರ್ಲಕ್ಷ್ಯವೇ ಕಾಣುತ್ತಿದೆ. ಅವರ ಸಂಖ್ಯಾ ಬಲ ಸಣ್ಣದಾದರೂ ಧೀಮಂತಿಕೆಯ ಬಲ ತಮ್ಮನ್ನು ಮೀರಿಸುವಂತಿದೆ. ಇದು ದುರ್ಯೋಧನನ ಮನಸ್ಸನ್ನು ಕಾಡಿದ ಇನ್ನೊಂದು ಗಂಭೀರ ಚಿಂತೆ.

ಈ ಸಮಸ್ಯೆಯ ಬಗ್ಗೆ ಇನ್ನಾದರೂ ಗಮನ ಹರಿಸಿ ತುಂಬಾ ಎಚ್ಚರದಿಂದ ವರ್ತಿಸಿರಿ ಎಂದು ದ್ರೋಣರಿಗೆ ಆಜ್ಞಾಪಿಸುವ ಧಾಟಿಯಲ್ಲಿ ದುರ್ಯೋಧನ ಈ ಮಾತನ್ನಾಡಿದ್ದಾನೆ.

★

— ಬನ್ನಂಜೆ ಗೋವಿಂದಾಚಾರ್ಯ

ದುರ್ಯೋಧನ ಪಾಂಡವರ ಸೇನೆಯನ್ನು ಕಂಡು ಭಯಗ್ರಸ್ತನಾದ ಎನ್ನುವ ಮಾತನ್ನು ಈ ಹಿಂದೆ ನೋಡಿದ್ದೇವೆ. ಮುಂದಿನ ಮೂರು ಶ್ಲೋಕಗಳು ಅದನ್ನೇ ವಿವರಿಸುತ್ತವೆ:

**ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನಸಮಾ ಯುಧಿ ।**
**ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ॥ ೪ ॥**

**ಧೃಷ್ಟಕೇತುಶ್ಚೇಕಿತಾನಃ ಕಾಶಿರಾಜಶ್ಚ ವೀರ್ಯವಾನ್ ।**
**ಪುರುಜಿತ್ ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ ॥ ೫ ॥**

**ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್ ।**
**ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ॥ ೬ ॥**

(ಈ ಪಾಂಡವರ ಸೇನೆಯಲ್ಲಿರುವವರು ಪರಾಕ್ರಮಿಗಳು; ಹಿರಿಯ ಬಿಲ್ಲೋಜರು; ಯುದ್ಧದಲ್ಲಿ ಭೀಮಾರ್ಜುನರಿಗೆ ಎಣೆಯಾದವರು. ಮಹಾರಥಿಗಳಾದ ಸಾತ್ಯಕಿ, ವಿರಾಟ, ದ್ರುಪದ, ಮಹಾವೀರರಾದ ಧೃಷ್ಟಕೇತು, ಚೇಕಿತಾನ, ಕಾಶಿರಾಜ, ನರಶ್ರೇಷ್ಠರಾದ ಪುರುಜಿತ್, ಕುಂತಿಭೋಜ, ಶಿಬಿರಾಜ, ಹಾಗೆಯೇ ವಿಕ್ರಮಶಾಲಿ ಯುಧಾಮನ್ಯು ಮತ್ತು ವೀರ್ಯವಂತನಾದ ಉತ್ತಮೌಜಸ್ – ಇವರೆಲ್ಲಾ ಪಾಂಡವ ಸೇನೆಯ ಮುಂಚೂಣಿಯಲ್ಲಿ ನಿಂತ ನಾಯಕರು. ಇವರ ಜೊತೆಗೆ ಸುಭದ್ರೆಯ ಮಗ ಅಭಿಮನ್ಯು ಮತ್ತು ದ್ರೌಪದಿಯ ಐವರು ಮಕ್ಕಳು. ಚಿಕ್ಕ ಮಕ್ಕಳಾದರೇನು, ಎಲ್ಲರೂ ಮಹಾರಥಿಗಳೇ.)

ಈ ಶ್ಲೋಕಗಳಲ್ಲಿ ದುರ್ಯೋಧನನು ಉಲ್ಲೇಖಿಸಿದ ವ್ಯಕ್ತಿಗಳು ಮತ್ತು ವ್ಯಕ್ತಿಗಳ ಸಂಖ್ಯೆ ಎರಡೂ ತುಂಬ ಅರ್ಥಪೂರ್ಣ. ಮೊದಲು ಸಂಖ್ಯೆಯ ಬಗೆಗೆ ನೋಡೋಣ. ಪಾಂಡವರ ಮಕ್ಕಳನ್ನು ಬಿಟ್ಟರೆ ಹೊರಗಿನಿಂದ ಬಂದ ವೀರರಲ್ಲಿ ಹನ್ನೊಂದು ಮಂದಿಯು

ಹೆಸರನ್ನು ದುರ್ಯೋಧನ ಉಲ್ಲೇಖಿಸುತ್ತಾನೆ. ಇದು ಗಮನಾರ್ಹವಾದ ಸಂಖ್ಯೆ. ಮುಂದೆ ತಮ್ಮ ಕಡೆಯ ವೀರರ ಹೆಸರನ್ನು ಹೇಳುವಾಗ ದುರ್ಯೋಧನ ಏಳೇ ಮಂದಿಯ ಹೆಸರನ್ನು ಉಲ್ಲೇಖಿಸುತ್ತಾನೆ. ದುರ್ಯೋಧನನ ಸೇನೆಯಲ್ಲಿ ಹನ್ನೊಂದು ಅಕ್ಷೋಹಿಣಿ. ಆದರೆ ಅವನು ಉಲ್ಲೇಖಿಸುವುದು ಏಳು ಮಂದಿಯನ್ನು. ಪಾಂಡವರ ಸೇನೆಯಲ್ಲಿ ಏಳು ಅಕ್ಷೋಹಿಣಿ. ಆದರೆ ಆ ಕಡೆಯಲ್ಲಿ ಹನ್ನೊಂದು ಮಂದಿ ಮುಖಂಡರನ್ನು ದುರ್ಯೋಧನ ಗುರುತಿಸುತ್ತಾನೆ. ವಾಸ್ತವವಾಗಿ ತಮ್ಮ ಕಡೆಯಲ್ಲಿ ಒಬ್ಬೊಬ್ಬ ಅಕ್ಷೋಹಿಣೀ ಪತಿಯಂತೆ ಹನ್ನೊಂದು ಮಂದಿಯನ್ನೂ ಪಾಂಡವರ ಕಡೆಯಲ್ಲಿ ಏಳು ಮಂದಿಯನ್ನೂ ಹೇಳ ಬೇಕಿತ್ತು. ಆದರೆ ದುರ್ಯೋಧನನ ಲೆಕ್ಕಚಾರ ತಿರುವು–ಮುರುವು ಆಗಿದೆ. ಹನ್ನೊಂದು ಇದ್ದಲ್ಲಿ ಏಳು, ಏಳು ಇದ್ದಲ್ಲಿ ಹನ್ನೊಂದು. ಈ ಏಳು ಹನ್ನೊಂದೇ ಅವನ ದುರಂತಕ್ಕೆ ಕಾರಣವಾಯಿತು.

ತಮ್ಮ ಕಡೆಯಲ್ಲಿ ಹನ್ನೊಂದು ಅಕ್ಷೋಹಿಣಿ ಇದ್ದರೂ ಏಳು ಮಂದಿಗಿಂತ ಹೆಚ್ಚು ವೀರರನ್ನು ಗುರುತಿಸುವುದು ಅವನಿಗೆ ಅಸಾಧ್ಯವಾಯಿತು. ಪಾಂಡವರಲ್ಲಿ ಏಳೇ ಅಕ್ಷೋ ಹಿಣಿ ಇದ್ದರೂ ಅಲ್ಲಿ ಹನ್ನೊಂದು ಮಂದಿ ಮುಖಂಡರು ಅವನ ಕಣ್ಣಿಗೆ ಬಿದ್ದರು.

ಇನ್ನೂ ಒಂದುರೀತಿಯಿಂದ ಈ ಸಂಖ್ಯೆಯ ಚಮತ್ಕಾರವನ್ನು ಇಲ್ಲಿ ಗುರುತಿಸ ಬಹುದು. ಪಾಂಡವರ ಕಡೆಯ ಈ ಹನ್ನೊಂದು ಮಂದಿಯ ಜೊತೆಗೆ ಸೇನಾಪತಿಯಾದ ಧೃಷ್ಟದ್ಯುಮ್ನ, ಸುಭದ್ರೆಯ ಮಗ ಅಭಿಮನ್ಯು ಮತ್ತು ದ್ರೌಪದಿಯ ಐವರು ಮಕ್ಕಳನ್ನು ಸೇರಿಸಿದರೆ ಆ ಕಡೆಯಲ್ಲಿ ಹದಿನೆಂಟು ಮಂದಿ ವೀರರನ್ನು ಹೇಳಿದಂತಾಯಿತು. ಹದಿ ನೆಂಟು ಅನ್ನುವುದು ಜಯದ ಸಂಕೇತ. (ಜ = ಎಂಟು, ಯ = ಒಂದು.) ಈ ಕಡೆ ಹನ್ನೊಂದು ಆ ಕಡೆ ಏಳು ಅಕ್ಷೋಹಿಣಿ ಹಂಚಿ ಹೋಗಿದ್ದರೂ ದುರ್ಯೋಧನನ ಲೆಕ್ಕಾ ಚಾರದಂತೆ ಎಲ್ಲಾ ಹದಿನೆಂಟು ಮಂದಿ ವೀರರೂ ಪಾಂಡವರ ಕಡೆಯೇ ಜಮಾಯಿಸಿ ದ್ದಾರೆ. ಆದ್ದರಿಂದ ಜಯ ಅವರಿಗೆ ಕಟ್ಟಿಟ್ಟದ್ದು ಎನ್ನುವ ಸೂಚನೆ ಈ ಮಾತಿನಲ್ಲಿದೆ.

× × ×

ಇನ್ನು ಪಾಂಡವರ ಬಗ್ಗೆ ಉಲ್ಲೇಖಿಸಿದ ವಿಶೇಷಣಗಳನ್ನು ನೋಡೋಣ. ಅವನು ಒಟ್ಟಂದದಲ್ಲಿ ಮೂರು ವಿಶೇಷಣಗಳಿಂದ ಪಾಂಡವ ಪಕ್ಷದ ವೀರರನ್ನು ಪ್ರಶಂಸಿ ಸುತ್ತಾನೆ; ಎಲ್ಲರೂ ಶೂರರು, ಮಹೇಷ್ವಾಸರು ಮತ್ತು ಭೀಮಾರ್ಜುನಸಮರು.

ಶೂರರು ಎಂದರೆ ಯುದ್ಧದಲ್ಲಿ ಬೆನ್ನು ತೋರಿಸದೆ ನಾಯಕ ಸ್ಥಾನದಲ್ಲಿ ನಿಂತು ಹೋರಾಡಬಲ್ಲವರು. ಸಂಸ್ಕೃತದಲ್ಲಿ ಸಿಂಹಕ್ಕೂ 'ಶೂರ' ಎಂಬ ಹೆಸರಿದೆ. ಸಿಂಹ ಗಾತ್ರದಲ್ಲಿಯೂ ಬಲದಲ್ಲಿಯೂ ತನ್ನಕ್ಕಿಂತ ಹಿರಿದಾದ ಆನೆಯನ್ನು ಕೂಡ ಮಣಿಸಬಲ್ಲ ಜಾಣ; ಕಾಡಿನ ರಾಜ. ಅದಕ್ಕೆಂದೇ ಅದು ಶೂರ. ಈ ಪಾಂಡವರ ಕಡೆಯ ಶೂರರೂ ಹಾಗೆಯೇ. ಆನೆಯಂತೆ ಸೊಕ್ಕಿದ ತಮ್ಮ ಕಡೆಯ ವೀರರನ್ನು ಸಿಂಹದಂತೆ ತಂತ್ರ ಗಾರಿಕೆಯಿಂದ ಮಣಿಸಬಲ್ಲ ಜಾಣರು ಎನ್ನುವ ಧ್ವನಿ ಈ ವಿಶೇಷಣದಲ್ಲಿದೆ.

ಎರಡನೆಯ ವಿಶೇಷಣ: "ಮಹೇಷ್ವಾಸ". ಈ ಪದದ ಅರ್ಥ ಹಿರಿಯ ಬಿಲ್ಲೋ-
-ಜರು, ಬಿಲ್ಲುಗಾರಿಕೆಯಲ್ಲಿ ಸಾಟಿ ಇರದ ವೀರರು ಎಂದು. ಬಿಲ್ಲು ವಿದ್ಯೆಯ ಆಚಾರ್ಯ
ಪುರುಷರಾದ ಭೀಷ್ಮ, ದ್ರೋಣರಿಗೂ ಇಂತಹ ವಿಶೇಷಣವನ್ನು ಬಳಸದ ದುರ್ಯೋಧನ
ಪಾಂಡವರ ಸೇನೆಯ ಪ್ರತಿಯೊಬ್ಬರೂ ಮಹೇಷ್ವಾಸರು ಎನ್ನುತಿದ್ದಾನೆ. ಅವನ ಒಡ
ಲೊಳಗೆ ಹೊಕ್ಕು ಕಾಡುತ್ತಿರುವ ಪುಕ್ಕು ಎಷ್ಟು ಗಾಢವಾದದ್ದು ಎನ್ನುವುದು ಇದರಿಂದ
ಸ್ಫುಟವಾಗುತ್ತದೆ.

ಎಲ್ಲಕ್ಕಿಂತ ಮಹತ್ವದ ವಿಶೇಷಣ; "ಭೀಮಾರ್ಜುನಸಮಾ ಯುಧಿ". ಎಲ್ಲರೂ
ಯುದ್ಧದಲ್ಲಿ ಭೀಮಾರ್ಜುನರಿಗೆ ಸಮಾನರು! ವಾಸ್ತವವಾಗಿ ಆ ಎರಡೂ ಸೇನೆಯಲ್ಲಿ
ಭೀಮಾರ್ಜುನರಿಗೆ ಸಮನಾದವರು ಭೀಮಾರ್ಜುನರು ಮಾತ್ರ. ಆದರೆ ದುರ್ಯೋಧನನ
ಗೊಂದಲಗೆಟ್ಟ ಮನಸ್ಸಿಗೆ ಆ ಕಡೆಯ ಎಲ್ಲರೂ ಭೀಮಾರ್ಜುನರಂತೆ ಕಾಣಿಸತೊಡಗಿ
ದ್ದಾರೆ. ಇದು ಅವನ ಭಯದ ಪರಾಕಾಷ್ಠೆ!

ಹಿಂದಿನ ಹಿನ್ನೆಲೆಯನ್ನು ನಾವು ಇಲ್ಲಿ ನೆನಪಿಸಿಕೊಳ್ಳಬೇಕು. ಸೇನಾ ಸನ್ನಾಹ
ನಡೆಸುವಾಗ ಭೀಮಾರ್ಜುನರ ವಿರುದ್ಧ ಯುದ್ಧಬೇಡವೆಂದು ದುರ್ಯೋಧನನಿಗೆ ಹಿರಿಯ
ರೆಲ್ಲಾ ತಿಳಿಹೇಳಿದ್ದಾಗ ಆತ ಅದನ್ನು ಒಪ್ಪಲಿಲ್ಲ. ಜಗತ್ತಿನ ಪ್ರಮುಖ ಸೈನ್ಯವೆಲ್ಲಾ
ತನ್ನ ಕಡೆ ಇರುವಾಗ ಭೀಮಾರ್ಜುನರು ಯಾವ ಲೆಕ್ಕ? ಎಂದು ಅವರ ಮುಂದೆ ಸವಾ
ಲೆಸೆದಿದ್ದ. ಬಾಯಿಯಲ್ಲಿ ಎಷ್ಟು ಬಡಾಯಿಕೊಚ್ಚಿದ್ದರೂ ಅವನಿಗೆ ಭೀಮಾರ್ಜುನರು
ಸಿಂಹಸ್ವಪ್ನವಾಗಿದ್ದರು ಎನ್ನುವ ಮಾತು ಈಗ ಬಯಲಿಗೆ ಬಂತು. ಅವನ ಸುಪ್ತ
ಪ್ರಜ್ಞೆಯಲ್ಲಿದ್ದ ಭಯ ಅವನಿಗರಿವಿಲ್ಲದಂತೆಯೇ ವ್ಯಕ್ತವಾಗಿ ಬಾಯಲ್ಲಿ ಮೂಡಿ ಬಂತು.
ಈಗರಿತೂ ಅವನು ಇಷ್ಟು ಕಂಗೆಟ್ಟಿದ್ದಾನೆ; ಭೀಮಾರ್ಜುನರು ಮಾತ್ರವೇ ಅಲ್ಲ ಪಾಂಡ
ವರ ಪಕ್ಷದಲ್ಲಿರುವ ಪ್ರತಿಯೊಬ್ಬರೂ ಅವನಿಗೆ ಭೀಮಾರ್ಜುನರಂತೆ ಕಾಣಿಸುತ್ತಿದ್ದಾರೆ.
ಎಂತಹ ಶೋಚನೀಯ ಪರಿಸ್ಥಿತಿ! ಈಗ ನಿಜವಾಗಿಯೂ ದುರ್ಯೋಧನನ್ನು ಮನೋ
ವಿಜ್ಞಾನಿಯ ಬಳಿ ಚಿಕಿತ್ಸೆಗೆ ಕಳುಹಿಸಬೇಕು. ಅವನಿಗೆ ತುರ್ತಾಗಿ ಸೈಕೋತೆರಪಿಯ
ಅಗತ್ಯವಿದೆ. ಆದರೆ ಏನು ಮಾಡೋಣ! ಮನೋವೈದ್ಯನಾದ ಶ್ರೀ ಕೃಷ್ಣ, ಜಗತ್ತಿನ
ಮೊದಲ ಸೈಕಿಯಾಟ್ರಿಸ್ಟ್ ಪಾಂಡವರ ಬಳಿ ಇದ್ದಾನೆ. ಇವನ ಮನೋರೋಗಕ್ಕೆ
ಮದ್ದೇ ಇಲ್ಲ.

× × ×

ದುರ್ಯೋಧನ ಉಲ್ಲೇಖಿಸಿದ ಪಾಂಡವ ಪಕ್ಷದ ವೀರರ ವಿವರವನ್ನು ಮುಂದೆ
ನೋಡೋಣ. ಅವನು ಉಲ್ಲೇಖಿಸಿದ ಮೊದಲ ವ್ಯಕ್ತಿ ಯುಯುಧಾನ. ಯಾದವ
ವೀರನಾದ ಸಾತ್ಯಕಿಯೇ ಯುಯುಧಾನ. ಅವನು ಸತ್ಯಕನ ಮಗ. ಅದರಿಂದ ಸಾತ್ಯಕಿ.
ಶಿನಿಯ ಮೊಮ್ಮಗ. ಆದರಿಂದ ಶೈನೇಯ. ಯುಯುಧಾನ ಎನ್ನುವುದು ಅವನ ನಾಮ
ಕರಣದ ಹೆಸರು. ಈ ಸಾತ್ಯಕಿ ಕೃಷ್ಣನ ಪರಮ ಮಿತ್ರ, ಪಟ್ಟಶಿಷ್ಯ. ಅದಕ್ಕೆಂದೇ
ದುರ್ಯೋಧನನಿಗೆ ಅವನ ಮೇಲೆ ವಿಶೇಷ ಆಗ್ರಹ.

ಇಲ್ಲಿ ಗಮನಿಸಬೇಕಾದ ಇನ್ನೊಂದು ಹಿನ್ನೆಲೆಯುಂಟು. ದುರ್ಯೋಧನ ಬಲ ರಾಮನ ಪ್ರೀತಿಯ ಶಿಷ್ಯ. ಆ ಪ್ರೀತಿಯ ಬಲದಿಂದಲೇ ಅವನು ಬಲರಾಮನನ್ನು ಪುಸಲಾಯಿಸಿ ಸುಭದ್ರೆಯನ್ನು ಮದುವೆಯಾಗಲು ಬಯಸಿದ್ದ. ಬಲರಾಮ ಅದಕ್ಕೆ ಒಪ್ಪಿಯೂ ಇದ್ದ. ಕೃಷ್ಣನ ಕಾರಸ್ಥಾನದಿಂದ ಈ ಮದುವೆ ತಪ್ಪಿ ಹೋಗದಿರುತ್ತಿದ್ದರೆ ಸುಭದ್ರೆಯ ಸಂಬಂಧಕ್ಕಾಗಿಯಾದರೂ ಕೃಷ್ಣ ತಟಸ್ಥನಾಗುತ್ತಿದ್ದನೇನೋ. ಕೃಷ್ಣನ ಈ ಪಟ್ಟ ಶಿಷ್ಯ ತಮ್ಮ ಕಡೆಗೇ ಬಂದುಬಿಡುತ್ತಿದ್ದನೇನೋ. ಕೈಗೆ ಬಂದ ತುತ್ತು ಬಾಯಿಗೆ ಬರದೇ ಹೋಯಿತೇನೋ ಎನ್ನುವ ವಿಷಾದ ಇಲ್ಲಿ ಸ್ಫುಟವಾಗಿದೆ.

ಸಾತ್ಯಕಿಯ ಹೆಸರನ್ನು ಉಲ್ಲೇಖಿಸುವಾಗ ದುರ್ಯೋಧನನ ಮನಸ್ಸಿನಲ್ಲಿ ಇನ್ನೊಂದು ಘಟನೆಯೂ ಹಾದುಹೋಗಿರಬೇಕು. ಯುದ್ಧ ಪ್ರಾರಂಭವಾಗುವ ಮುನ್ನ ದುರ್ಯೋಧನ ಗುರು ಬಲರಾಮನ ಬಳಿ ಬಂದು ಯುದ್ಧದಲ್ಲಿ ತನಗೆ ಸಹಾಯ ಮಾಡಬೇಕೆಂದು ಕೇಳಿಕೊಂಡ. ಬಲರಾಮನಿಗೆ ನಿಜಕ್ಕೂ ದುರ್ಯೋಧನನ ಮೇಲೆ ಪ್ರೀತಿಯಿತ್ತು. ಏನಿದ್ದರೂ ತನ್ನ ಪಟ್ಟ ಶಿಷ್ಯನಲ್ಲವೆ? ದುರ್ಯೋಧನನ ಮಗಳು ಲಕ್ಷಣೆಯನ್ನೇ ಕೃಷ್ಣನ ಮಗ ಪ್ರದ್ಯುಮ್ನ ಮದುವೆಯಾಗಿದ್ದನಲ್ಲವೆ? ಹೀಗೆ ಶಿಷ್ಯನೂ ಸಂಬಂಧಿಯೂ ಆದ ದುರ್ಯೋಧನನನ್ನು ವಿರೋಧಿಸುವುದಕ್ಕೆ ಬಲರಾಮನ ಮನಸ್ಸು ಒಪ್ಪಲಿಲ್ಲ. ದುರ್ಯೋಧನನೂ ಇದನ್ನೇ ನಿರೀಕ್ಷಿಸಿ ಬಂದಿದ್ದ. ಒಂದು ವೇಳೆ ಈ ಬಾಂಧವ್ಯಕ್ಕೆ ಕಟ್ಟು ಬಿದ್ದು ಬಲರಾಮ ದುರ್ಯೋಧನನಿಗೆ ತನ್ನ ಬೆಂಬಲವನ್ನು ಘೋಷಿಸಿದ್ದರೆ, ಅವನ ಮಾತಿಗೆ ವಿರುದ್ಧವಾಗಿ ಕೃಷ್ಣನಾಗಲೀ, ಯಾದವವೀರರಾಗಲೀ ಪಾಂಡವರ ಕಡೆಗೆ ಹೋಗುವುದು ಸಾಧ್ಯವಾಗುತ್ತಿರಲಿಲ್ಲ. ಆದರೆ ದುರ್ಯೋಧನನ ದುರ್ದೈವ ದೊಡ್ಡದು. ಬಲರಾಮ ತಟಸ್ಥವಾಗಿ ನಿಂತುಬಿಟ್ಟ. ''ಇಬ್ಬರೂ ನನ್ನ ಸಂಬಂಧಿಕರು. ಆದ್ದರಿಂದ ನಾನು ಯಾವ ಕಡೆಗೂ ಇಲ್ಲ. ಯಾದವರು ತಮಗೆ ಯಾವ ಪಕ್ಷ ಹಿತವೋ ಆ ಪಕ್ಷ ಸೇರಿಕೊಳ್ಳಲಿ. ನಾನಂತೂ ಮಧ್ಯೆ ಪ್ರವೇಶಿಸುವುದಿಲ್ಲ" ಎಂದು ಸಾರಿ ಬಿಟ್ಟ. ಪರಿಣಾಮವಾಗಿ ಯುಯುಧಾನ ಮತ್ತು ಚೇಕಿತಾನ ಪಾಂಡವರ ಕಡೆಗೆ ಹೋದರು, ಕೃತವರ್ಮ ತನ್ನ ಬೆನ್ನಿಗೆ ನಿಂತ. ಆದರೆ ಕೃತವರ್ಮ ತನ್ನತ್ತ ಬಂದುದು ದುರ್ಯೋಧನನಿಗೆ ದೊಡ್ಡ ಸಂಗತಿಯಾಗಿ ಕಾಣಲಿಲ್ಲ. ಇವರಿಬ್ಬರು ತನ್ನ ಕೈ ತಪ್ಪಿ ಆ ಕಡೆಗೆ ಹೋದದ್ದು ದೊಡ್ಡ ಸಂಗತಿಯಾಯಿತು. ಅದಕ್ಕೆಂದೇ ಇಡಿಯ ಯಾದವ ಸೇನೆಯ ಪ್ರತಿನಿಧಿಯಾಗಿ ಸಾತ್ಯಕಿಯ ಹೆಸರನ್ನು ಮೊದಲು ಉಲ್ಲೇಖಿಸುತ್ತಾನೆ.

× × ×

ದುರ್ಯೋಧನ ಉಲ್ಲೇಖಿಸುವ ಎರಡನೆಯ ವ್ಯಕ್ತಿ ವಿರಾಟ. ಈತನೂ ತಮ್ಮ ಪಕ್ಷಕ್ಕೆ ಬರಬೇಕಾಗಿದ್ದು ವಿಧಿಯ ದುರ್ವಿಲಾಸದಿಂದ ಪಾಂಡವರ ಕಡೆಗೆ ಸೇರಿಕೊಂಡು ತನಗೆ ಅನ್ಯಾಯವಾಯಿತು ಎನ್ನುವ ವೇದನೆಯನ್ನು ದುರ್ಯೋಧನ ಇಲ್ಲಿ ಸೂಚಿಸುತ್ತಿದ್ದಾನೆ.

ಈ ಮಾತು ಸ್ಫುಟವಾಗಬೇಕಾದರೆ ವಿರಾಟನ ಪೂರ್ವೇತಿಹಾಸವನ್ನು ಪರಿಶೀಲಿಸಬೇಕು. ವಿರಾಟ ಕೀಚಕನ ಸೋದರಿ ಸುದೇಷ್ಣೆಯ ಗಂಡ. ಕೀಚಕನೇನಾದರೂ ಈಗ ಬದುಕಿದ್ದರೆ ವಿರಾಟ ಪಾಂಡವರ ಕಡೆಗೆ ಹೋಗುವ ಸಂಭವವೇ ಇರಲಿಲ್ಲ. ಸ್ವತಃ ಕೀಚಕನೇ ವಿರಾಟನ ಸೇನೆಯ ಮಂಚೂಣಿಯಲ್ಲಿ ನಿಂತು ಕೌರವರ ಕಡೆಗೆ ಬಂದು ಹೋರಾಡುತ್ತಿದ್ದ.

ಭೀಮಸೇನ, ಬಲರಾಮ, ಶಲ್ಯ ಈ ಮೂವರನ್ನು ಬಿಟ್ಟರೆ ಗದಾಯುದ್ಧದಲ್ಲಿ ಕೀಚಕನಿಗೆ ಸಾಟಿಯಾದವರು ಆ ಕಾಲದಲ್ಲಿ ಇನ್ನೊಬ್ಬರಿರಲಿಲ್ಲ. ಅಂತಹ ಕೀಚಕನ ಸಾವು ಭೀಮನ ಕೈಯಲ್ಲೇ ಆಗಬೇಕೇ? ಅದೂ ಅಜ್ಞಾತವಾಸದ ಮುಕ್ತಾಯದ ಹಂತದಲ್ಲಿ? ಕೀಚಕನ ಸಾವು ಅವನ ದುರ್ದೈವವಷ್ಟೇ ಅಲ್ಲ, ದುರ್ಯೋಧನನ ದುರ್ದೈವವೂ ಆಯಿತು. ಪರಿಣಾಮವಾಗಿ ತನ್ನ ಕಡೆಗೆ ಬರಬೇಕಾಗಿದ್ದ ವಿರಾಟ ದೇಶದ ಒಂದು ಅಕ್ಷೋಹಿಣಿ ಸೇನೆ ಅನ್ಯಾಯವಾಗಿ ಪಾಂಡವರ ಪಾಲಿಗೆ ಸಂದಿತು. ಇಷ್ಟೆಲ್ಲ ವೇದನೆಯನ್ನು ಬಗೆಯಲ್ಲಿ ತುಂಬಿಕೊಂಡು ದುರ್ಯೋಧನ ದ್ರೋಣರ ಮುಂದೆ ಹೇಳುತ್ತಾನೆ; "ವಿರಾಟಶ್ಚ". ವಿರಾಟ ಕೂಡ ನಮ್ಮ ಕೈ ತಪ್ಪಿ ಹೋದ. ಕೀಚಕ ಸತ್ತದ್ದು ಮಾತ್ರವಲ್ಲ; ವಿರಾಟನ ಮಗಳು ಉತ್ತರೆ ಅಭಿಮನ್ಯುವಿನ ಪತ್ನಿಯಾಗಿ ಪಾಂಡವರ ಸೊಸೆಯಾಗಿ ಅವರ ಮನೆ ತುಂಬಿದಳು. ಹೆಣ್ಣಿನ ಜೊತೆಗೆ ಒಂದು ಅಕ್ಷೋಹಿಣಿ ಸೇನೆಯೂ ಅವರದಾಯಿತು. ಆದಕ್ಕಾಗಿ ದುರ್ಯೋಧನ ತನ್ನ ದುರ್ದೈವವನ್ನೇ ಈ ಮೂಲಕ ಹಳಿದುಕೊಂಡಂತಿದೆ.

× × ×

**ಲೇಖಾಂಕ: ೧೨**

# <u>ಭಗವದ್ಗೀತೆ</u>

**–ಬನ್ನಂಜೆ ಗೋವಿಂದಾಚಾರ್ಯ**

ಮೂರನೆ ಹೆಸರು ದ್ರುಪದ. ಈತನು ಪಾಂಡವರ ಸಂಬಂಧವಾಗುವ ಮೊದಲು, ಪಾಂಡವರು ಇನ್ನೂ ಚಿಕ್ಕ ಮಕ್ಕಳಾಗಿದ್ದಾಗ ಕೃಷ್ಣನ ವಿರುದ್ಧವಾಗಿ ಹೋರಾಟಕ್ಕಿಳಿದ ಜರಾಸಂಧನಿಗೆ ಸೈನ್ಯದ ನೆರವನ್ನಿತ್ತವನು. ಆದರೆ ಈಗ ಅದೇ ದ್ರುಪದ ಕೃಷ್ಣನ ಪಕ್ಷದಲ್ಲಿ ನಿಂತು ತಮ್ಮನ್ನು ವಿರೋಧಿಸುತ್ತಿದ್ದಾನೆ; ತನ್ನ ಇಡಿಯ ಸೇನೆಯ ಜೊತೆಗೆ; ತನ್ನ ವೀರರಾದ ಮಕ್ಕಳ ಜೊತೆಗೆ. ಒಬ್ಬ ಮಗ ಧೃಷ್ಟದ್ಯುಮ್ನನಂತೂ ಪಂಡವರ ಸೇನಾಪತಿಯೇ ಆಗಿಬಿಟ್ಟಿದ್ದಾನೆ. ಇದಕ್ಕೆ ಮುಖ್ಯ ಕಾರಣ ದ್ರೌಪದಿ ಪಾಂಡವರ ಕೈಹಿಡಿದದ್ದು.

ವಾಸ್ತವವಾಗಿ ದ್ರೌಪದಿ ತನ್ನ ಮಡದಿಯಾಗಬೇಕೆಂದು ದುರ್ಯೋಧನ ಬಯಸಿದ್ದ. ಅದಕ್ಕಾಗಿ ಮತ್ಸ್ಯಭೇದದ ಪಣವನ್ನು ಗೆದೆಯಲು ಕರ್ಣನ ನೆರವನ್ನೂ ಬಯಸಿದ್ದ. ಕರ್ಣ ಲಕ್ಷ್ಯಭೇದ ಮಾಡಲೂ ಬಹುದಿತ್ತು. ಆಗ ದ್ರೌಪದಿ ತನ್ನವಳೇ ಆಗಿ ಬಿಡುತ್ತಿದ್ದಳು. ಹಾಗಾಗಿದ್ದರೆ ದ್ರುಪದನ ಸೇನೆ ತನ್ನ ಕಡೆಗೆಯೇ ಬರಬೇಕಾಗಿತ್ತಲ್ಲವೆ?

ಆದರೆ ಇಲ್ಲಿಯೂ ವಿಧಿ ತನ್ನ ವಿರುದ್ಧವಾಗಿ ಸಂಚು ಹೂಡಿತು. ಕರ್ಣ ಮತ್ಸ್ಯಭೇದ ಮಾಡದಂತೆ ದ್ರೌಪದಿ ಅವನನ್ನು ಅವಮಾನಿಸಿ ನುಡಿದಳು. ಸಿಟ್ಟಿಗೆದ್ದ ಕರ್ಣ ದೂರ ಸರಿದು ನಿಂತ. ದ್ರೌಪದಿಯ ಮಾಲೆ ಪಾಂಡವರ ಕೊರಳಿಗೆ ಬಿತ್ತು. ಹಾಗಾಗಿ ತಾನು ಪಾಂಚಾಲ ಸೇನೆಯಿಂದ ವಂಚಿತನಾದೆ ಎಂಬ ಭಾವನೆಯಿಂದ ದುರ್ಯೋಧನ ನುಡಿದ– 'ದ್ರುಪದಶ್ಚ'. ದ್ರುಪದನೂ ಕೈತಪ್ಪುವಂತೆ ವಿಧಿ ಹೂಟ ಹೂಡಿತು. ಈ ಶ್ಲೋಕದ ಕೊನೆಯಲ್ಲಿ ಬಂದ ಮಹಾರಥಃ ವಿಶೇಷಣ ಇಲ್ಲಿ ಉಲ್ಲೇಖಗೊಂಡ ಮೂವರಿಗೂ ಅನ್ವಯಿಸುವಂತಹದು. ಮಹಾರಥನಾದ ಸಾತ್ಯಕಿ, ಮಹಾರಥನಾದ ವಿರಾಟ ಮತ್ತು ಮಹಾರಥನಾದ ದ್ರುಪದ. ಮಹಾರಥನ ಲಕ್ಷಣವನ್ನು ಪ್ರಾಚೀನರು ಹೀಗೆ ನಿರೂಪಿಸುತ್ತಾರೆ–

**ಏಕೋ ದಶಸಹಸ್ರಾಣಿ ಯೋಧಯೇದ್ ಯಸ್ತು ಧನ್ವಿನಾಮ್ ।**
**ಶಸ್ತ್ರಶಾಸ್ತ್ರಪ್ರವೀಣಶ್ಚ ವಿಜ್ಞೇಯಃ ಸ ಮಹಾರಥಃ ॥**

(ಹತ್ತು ಸಾವಿರ ಮಂದಿ ಬಿಲ್ಲಾಳುಗಳನ್ನು ಏಕಾಕಿಯಾಗಿ ಹೋರಾಡಬಲ್ಲ ಶಸ್ತ್ರ ವಿದ್ಯಾಪಾರಂಗತನನ್ನು ಮಹಾರಥ ಎನ್ನುತ್ತಾರೆ.)

ದುರ್ಯೋಧನ ಹೆಸರಿಸುವ ನಾಲ್ಕನೇ ವ್ಯಕ್ತಿ 'ಧೃಷ್ಟಕೇತು'. ಈತ ಶಿಶುಪಾಲನ ಮಗ. ಶಿಶುಪಾಲ ಬದುಕಿದ್ದರೆ ಯಾವ ಕಾಲಕ್ಕಾದರೂ ಅವನು ಪಾಂಡವರ ಕಡೆಗೆ ಹೋಗುವುದು ಸಾಧ್ಯವಿತ್ತೆ? ಆದರೆ ಅಂತಹ ಶಿಶುಪಾಲ, ಜರಾಸಂಧನ ಅಂತರಂಗ ಶಿಷ್ಯನಾಗಿದ್ದ. ಶಿಶುಪಾಲ ರಾಜಸೂಯದ ಅಗ್ರಪೂಜೆಯಲ್ಲಿ ಕೃಷ್ಣನ ಕೈಯಲ್ಲೇ ಸಾವನ್ನಪ್ಪಿದ. ಅವನ ಮಗನಾದ ಧೃಷ್ಟಕೇತುವೋ ತನ್ನ ತಂದೆಯನ್ನು ಕೊಂದ ಕೃಷ್ಣನ ಕಡೆಗೇ ನಿಂತು ತಿಳಿಗೇಡಿತನದಿಂದ ತನ್ನನ್ನು ವಿರೋಧಿಸುತ್ತಿದ್ದಾನೆ ಎನ್ನುವುದು ದುರ್ಯೋಧನನ ಕೊರಗು.

ಧರ್ಮರಾಜನನ್ನು ತನ್ನ ಕಡೆಗೆ ಸೆಳೆದುಕೊಳ್ಳಬೇಕೆಂದು ಶಿಶುಪಾಲ ತನ್ನ ಮಗಳು ದೇವಕಿಯನ್ನು ಧರ್ಮರಜನಿಗೆ ಕೊಟ್ಟು ಮದುವೆ ಮಾಡಿದ್ದ. ಆ ಬಾಂಧವ್ಯದ ಪರಿಣಾಮ ಈಗಂತೂ ವಿಪರೀತವೇ ಆಯಿತು. ತನ್ನ ಸೋದರಿಯ ಗಂಡ ಎನ್ನುವ ಕಾರಣಕ್ಕಾಗಿ ಧರ್ಮರಾಜನನ್ನೇ ಧೃಷ್ಟಕೇತು ಬೆಂಬಲಿಸುವಂತಾಯಿತು.

ದುರ್ಯೋಧನ ಉಲೇಖಿಸಿದ ಐದನೆ ವ್ಯಕ್ತಿ 'ಚೇಕಿತಾನ'. ಈತನು ಸಾತ್ಯಕಿಯಂತೆಯೇ ಕೃಷ್ಣಪಕ್ಷಪಾತಿಯಾದ ಒಬ್ಬ ಯಾದವವೀರ; ಸಾತ್ಯಕಿಯ ಸಮವಯಸ್ಕ. ಸಾತ್ಯಕಿಯೂ ಇವನೂ ಒಂದೇ ದಿನ ಹುಟ್ಟಿದವರು. ಸಾತ್ಯಕಿಯ ಹಿನ್ನೆಲೆಯಲ್ಲಿ ಹೇಳಿದ ಮಾತೇ ಇವನಿಗೂ ಅನ್ವಯವಾಗುತ್ತದೆ.

ವಿರಾಟ ಅಭಿಮನ್ಯುವಿಗೆ ಹೆಣ್ಣು ಕೊಟ್ಟದ್ದಕ್ಕಾಗಿ ಪಾಂಡವರ ಕಡೆಗೆ ಬಂದ. ದ್ರುಪದನಿಗಂತೂ ಪಾಂಡವರು ಅಳಿಯಂದಿರೇ ಆದರು. ಧೃಷ್ಟಕೇತು ತನ್ನ ಸೋದರಿಯ ಸಂಬಂಧಕ್ಕಾಗಿ ಪಾಂಡವರ ಕಡೆಗೆ ಹೋದ. ಈ ಯುಯುಧಾನ ಮತ್ತು ಚೇಕಿತಾನರು ಯದುವೀರನಾದ ವಸುದೇವನ ತಂಗಿ ಕುಂತಿಯ ಮಕ್ಕಳು ಪಾಂಡವರು ಎನ್ನುವುದಕ್ಕಾಗಿ, ಯದುವಂಶದ ಹೆಣ್ಣು ಸುಭದ್ರೆ ಅರ್ಜುನನ ಮಡದಿ ಎನ್ನುವುದಕ್ಕಾಗಿ, ಪಾಂಡವರ ಕಡೆಗೆ ಹೋದರು. ಎಲ್ಲರೂ ಪಾಂಡವರ ಸಂಬಂಧವನ್ನು ಗಮನಿಸಿದರೇ ಹೊರತು ತನ್ನ ಸಂಬಂಧವನ್ನು ಗಮನಿಸಲಿಲ್ಲ. ದುರ್ಯೋಧನ ತನ್ನ ಈ ಕೊರಗಿಗೆ ನಿದರ್ಶನವಾಗಿ ಮುಂದಿನ ಹೆಸರನ್ನು ಉಲ್ಲೇಖಿಸುತ್ತಾನೆ; 'ಕಾಶಿರಾಜಶ್ಚ ವೀರ್ಯವಾನ್'.

ಈ ಕಾಶಿರಾಜನ ಹಿನ್ನೆಲೆಯನ್ನು ಗಮನಿಸಿದರೆ ದುರ್ಯೋಧನ ಏಕೆ ಇಷ್ಟು ಆತಂಕಪೂರ್ಣವಾಗಿ ಕಾಶಿರಾಜನ ಹೆಸರನ್ನು ಉಲ್ಲೇಕಿಸುತ್ತಾನೆ ಎಂಬುದು ಸ್ಫುಟವಾಗುತ್ತದೆ. ಆವನ ತಳ್ಳಂಕಕ್ಕೆ ಬಹಳ ಮಹತ್ವದ ಕಾರಣಗಳುಂಟು. ಕಾಶಿರಾಜನ ಮಗಳು ಕಾಳಿಯನ್ನು ಭೀಮಸೇನ ಮದುವೆಯಾಗಿದ್ದ. ಸಹಜವಾಗಿಯೇ ಅವನು ತನ್ನ ಅಳಿಯನಾದ ಭೀಮಸೇನನ ಪಕ್ಷಕ್ಕೆ ಹೋದ ಎಂದು ಸಮಾಧಾನಪಟ್ಟುಕೊಳ್ಳುವುದು ದುರ್ಯೋಧನನಿಗೆ ಸಾಧ್ಯವಿಲ್ಲ. ಏಕೆಂದರೆ ದುರ್ಯೋಧನನೂ ಕಾಶಿರಾಜನ ಮಗಳನ್ನೇ ಮದುವೆಯಾಗಿದ್ದ. ಏಕಕಾಲದಲ್ಲಿ ಕಾಶಿಯಲ್ಲಿ ಇಬ್ಬರು ರಾಜರು ಇರುವುದು ಅಸಾಧ್ಯವಾದ್ದರಿಂದ ಭೀಮಸೇನನ ಮಾವನಾದ ಕಾಶಿರಾಜನೇ ದುರ್ಯೋಧನನ ಮಾವನೂ ಆಗಿರಬೇಕು. ಈ ಕಾಶಿರಾಜ ಆತನ ಮಗನಿರಬಹುದೇನೋ !

ಹೀಗೆ ಸಂಬಂಧದಲ್ಲಿ ಇಬ್ಬರೂ ಸಮಾನರಾದರೂ ಕಾಶಿರಾಜ ತನ್ನನ್ನು ಬಿಟ್ಟು ಭೀಮಸೇನನ ಕಡೆಗೆ ಏಕೆ ಹೋದ? ಒಂದುವೇಳೆ ಬಲರಾಮನಂತೆ ಎರುಡು ಕಡೆಗೂ ಬೆಂಬಲವೀಯದೆ ಕಾಶಿರಾಜ ತಟಸ್ಥನಾಗಿ ನಿಂತಿದ್ದರೆ ದುರ್ಯೋಧನನಿಗೆ ಅರ್ಥವಾಗುತ್ತಿತ್ತು. ಆದರೆ ಈತ ತಾನು ಬಂಧುವೇ ಅಲ್ಲ ಎನ್ನುವಂತೆ ಭೀಮಸೇನನ ಕಡೆಗೆ ನಿಂತುಬಿಟ್ಟನಲ್ಲಾ! ಇದು ದುರ್ಯೋಧನನ ತಳ್ಳಂಕಕ್ಕೆ ಮುಖ್ಯ ಕಾರಣ.

ಈ ಶ್ಲೋಕಾರ್ಧದ ಕೊನೆಯಲ್ಲಿ ಬರುವ 'ವೀರ್ಯವಾನ್' ಎನ್ನುವ ವಿಶೇಷಣ ಹಿಂದಿನಂತೆಯೇ ಇಲ್ಲಿ ಬಂದ ಮೂವರಿಗೂ ಅನ್ವಯವಾಗುವಂತಹುದು. ಮಹಾವೀರನಾದ ಧೃಷ್ಟಕೇತು, ಮಹಾವೀರನಾದ ಚೇಕಿತಾನ ಮತ್ತು ಮಹಾವೀರನಾದ ಕಾಶಿರಾಜ.

ಸಾಮಾನ್ಯವಾಗಿ ಮೂವರಿಗೂ ಅನ್ವಯವಾಗುವ ಈ ವಿಶೇಷಣವನ್ನು ವಿಶೇಷವಾಗಿ ಕಾಶಿರಾಜನಿಗೇ ಅನ್ವಯಿಸುವುದರಲ್ಲೂ ಒಂದು ಔಚಿತ್ಯ ಉಂಟು. ಕಾಶಿಯ ರಾಜರು ಮಹಾವೀರರೆಂದು ವೇದಕಾಲದಿಂದಲೂ ಪ್ರಸಿದ್ಧರಾದವರು. ಬೃಹದಾರಣ್ಯಕೋಪನಿಷತ್ತು ಕಾಶಿರಾಜರ ಪರಾಕ್ರಮವನ್ನು ಹೀಗೆ ಉಲ್ಲೇಖಿಸುತ್ತದೆ:

**“ಯಥಾ ಕಾಶ್ಯೋ ವಾ ವೈದೇಹೋ ವೋಗ್ರಪುತ್ರ ಉಜ್ಜ್ಯಂ ಧನುರಧಿಜ್ಯಂ ಕೃತ್ವಾ ದ್ವೌ ಬಾಣವಂತೌ ಸಪತ್ನಾತಿವ್ಯಾಧಿನೌ ಹಸ್ತೇ ಕೃತ್ವೋಪೋತ್ತಿಷ್ಠೇತ್”**

ಕಾಶಿರಾಜರು ಆನುವಂಶಿಕವಾಗಿ ಹಿರಿಯ ಬಿಲ್ಗಾರರಾಗಿದ್ದರು; ಶತ್ರುಗಳ ಎದೆ ಗೆಡಿಸುವ ಪರಾಕ್ರಮದಿಂದ ಇಡಿಯ ದೇಶದಲ್ಲೇ ವಿಖ್ಯಾತಾರಾಗಿದ್ದರು ಎನ್ನುವುದು ಈ ಮಾತಿನಿಂದ ಸ್ಫುಟವಾಗುತ್ತದೆ. ಗೀತೆ ಕೂಡ ಮುಂದೆ ಕಾಶಿರಾಜನನ್ನು ಉಲ್ಲೇಖಿಸುವಾಗ ‘ಕಾಶ್ಯಶ್ಚ ಪರಮೇಷ್ವಾಸ:’ ಎಂದು ಉಲ್ಲೇಖಿಸಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ಅನಂತರದ ಎರಡು ಹೆಸರುಗಳು ‘ಪುರುಜಿತ್’ ಮತ್ತು ‘ಕುಂತಿಭೋಜ’. ಇವರು ಕುಂತಿಯ ಸೋದರರು. ಕುಂತಿಭೋಜ ದೇಶದ ರಾಜಪುತ್ರರು. ಯದುವಂಶದಲ್ಲಿ ವಸುದೇವನ ತಂಗಿಯಾಗಿ ಹುಟ್ಟಿದ ಪೃಥೆ ಕುಂತಿಭೋಜದ ರಾಜನಿಗೆ ದತ್ತಕ್ಕೆ ಹೋಗಿ ಕುಂತಿಯಾದಳು. ಈ ಸಂಬಂಧದ ನೆಪದಿಂದ ಈ ಇಬ್ಬರು ರಾಜಕುಮಾರರು ತಮ್ಮ ಸೋದರಿಯ ಮಕ್ಕಳ ಪಕ್ಷದಲ್ಲಿ ನಿಂತು ಹೋರಾಡಬಂದಿದ್ದಾರೆ. ಹೀಗೆ ಸಂಬಂಧದ ಅನುಬಂಧದಿಂದ ಪಾಂಡವರ ಕಡೆ ಏಳು ಅಕ್ಷೋಹಿಣಿ ಸೇನೆ ಒಟ್ಟಾಯಿತು. ಎಲ್ಲರು ಪಾಂಡವರ ಮೇಲಿನ ಅಭಿಮಾನದಿಂದ ಪಾಂಡವರನ್ನು ಗೆಲಿಸಲೆಂದೇ ವೀರಾವೇಶದಿಂದ ಬಂದವರು. ತನ್ನ ಕಡೆಯಲ್ಲಿ ಹನ್ನೊಂದು ಅಕ್ಷೋಹಿಣಿ ಇದ್ದರೇನು? ಯಾರೂ ತನ್ನ ಮೇಲಿನ ಪ್ರೀತಿಯಿಂದ ಬಂದವರಲ್ಲ. ದಾಕ್ಷಿಣ್ಯಕ್ಕಾಗಿ, ಅನ್ನದ ಋಣಕ್ಕಾಗಿ ಬಂದವರು. ಈ ಬಲಿಷ್ಠರಾದ ಏಳನ್ನು ಈ ದಾಕ್ಷಿಣ್ಯದ ಹನ್ನೊಂದು ಸೋಲಿಸಬಲ್ಲುದೆ? ಇದು ದುರ್ಯೋಧನನ ವಿಷಾದಕ್ಕೆ ಕಾರಣ.

ಈ ಶ್ಲೋಕದ ಕೊನೆಯಲ್ಲಿ ಬಂದ ಒಂಭತ್ತನೆಯ ವ್ಯಕ್ತಿ ‘ಶೈಬ್ಯಶ್ಚ ನರಪುಂಗವಃ’ ಪರೋಪಕಾರಕ್ಕಾಗಿ ತನ್ನ ಮೈಯ ಮಾಂಸವನ್ನೇ ಕಿತ್ತುಕೊಟ್ಟ ಮಹಾನುಭಾವ ಶಿಬಿಯ ವಂಶದಲ್ಲಿ ಬಂದ ಪುರುಷಶ್ರೇಷ್ಠನಾದ ಶಿಬಿದೇಶದ ರಾಜ.

ಈ ಹೆಸರಿನ ಹಿಂದೆಯೂ ಒಂದು ಇತಿಹಾಸ ಒಂಟು. ಕೋಟಿಕಾಶ್ಯ ಎಂಬುವನೊಬ್ಬ ಶಿಬಿದೇಶದ ರಾಜಕುಮಾರನಿದ್ದ. ಆತ ದುರ್ಯೋಧನನ ತಂಗಿ ದುಃಶಲೆಯ ಗಂಡ ಜಯದ್ರಥನ ಆಪ್ತಮಿತ್ರನಾಗಿದ್ದ. ಒಂದು ವರ್ಷದ ಕೆಳಗೆ ಪಾಂಡವರು ವನವಾಸದಲ್ಲಿ ಇದ್ದಾಗ ಈ ಜಯದ್ರಥನೂ ಕೋಟಿಕಾಶ್ಯನೂ ಸೇರಿ ದ್ರೌಪದಿಯನ್ನು ಅಪಹರಿಸಿದ್ದರು. ಮುಂದೆ ಪಾಂಡವರ ಕೈಯಲ್ಲಿ ಸಿಕ್ಕಿಬಿದ್ದು ಕೋಟಿಕಾಶ್ಯ ಜೀವತೆತ್ತ. ಜಯದ್ರಥ ಹೇಗೋ ಬದುಕಿಬಂದ. ಈ ದುರಂತ ಸಂಭವಿಸದೆ ಇರುತ್ತಿದ್ದರೆ, ಕೋಟಿಕಾಶ್ಯ ಇಂದು ಬದುಕಿ ಉಳಿದಿದ್ದರೆ ಸಿಂಧು ನರೇಶ ಜಯದ್ರಥನ ಸೇನೆಯ ಜೊತೆಗೆ ಶಿಬಿದೇಶದ ಸೇನೆಯೂ ತನ್ನ ಕಡೆಗೆ ಬರಬೇಕಾಗಿತ್ತಲ್ಲವೆ?

ಮಹಾಭಾರತದ ಒಂದು ಪಾಠದ ಪ್ರಕಾರ ಧರ್ಮರಾಜನಿಗೆ ಶೈಬ್ಯಾ ಎಂಬುವಳೊಬ್ಬಳು ಹೆಂಡತಿಯಿದ್ದಳು. ಅವಳು ಪ್ರಾಯಃ ಈ ಶೈಬ್ಯನ ಮಗಳೇ ಇರಬಹುದೇನೋ. ಹಾಗಾಗಿ ಈ ಮುದುಕನೂ ಅಳಿಯನ ಪಕ್ಷಕ್ಕೆ ಸೇರಿಕೊಂಡ. ಪಾಂಡವರ ಸೇನೆಯಲ್ಲಿ ಬಾಂಧವ್ಯಪ್ರಜ್ಞೆ ಎಷ್ಟು ಗಾಢವಾಗಿದೆ ಎನ್ನುವುದಕ್ಕೆ ಇದು ಒಂದು ಉದಾಹಾರಣೆ. (ತನ್ನ ತಂತ್ರದಿಂದಾಗಿ ಪಾಂಡವರ ಬಂಧುಗಳಲ್ಲಿ ತಪ್ಪಿಹೋದವನು ಪ್ರಾಯಃ ಶಲ್ಯನೊಬ್ಬನೇ. ಇಲ್ಲವಾದರೆ ಏಳು, ಹನ್ನೊಂದರ ಬದಲು ಎಂಟು, ಹತ್ತು ಆಗಿಬಿಡುತ್ತಿತ್ತು ಆದರೂ ದೈಹಿಕವಾಗಿ ಶಲ್ಯ ತಮ್ಮ ಕಡೆಗಿದ್ದರೂ ಮಾನಸಿಕವಾದಿ ಅವನು ಎಷ್ಟು ತಮ್ಮ ಕಡೆಯವನೋ ಹೇಳಬರುವಂತಿಲ್ಲ.)

ಈ ಪದ್ಯದ ಕೊನೆಯಲ್ಲಿ ಬಂಧ 'ನರಪುಂಗವಃ' ಎಂಬ ವಿಶೇಷಣ ವಿಶೇಷತಃ ಶಿಬಿರಾಜನಿಗೆ ಅನ್ವಯಿಸುವಂಥದಾದರೂ ಒಟ್ಟಂದದಲ್ಲಿ ಪುರುಜಿತ್ ಮತ್ತು ಕುಂತಿಭೋಜನಿಗೂ ಅನ್ವಯವಾಗುವಂತಹದು.

ಮುಂದಿನ ಶ್ಲೋಕದಲ್ಲಿ ಬಂದ ಹತ್ತನೆಯ ಹನ್ನೊಂದನೆಯ ವೀರರು– ಯುಧಾಮನ್ಯು ಮತ್ತು ಉತ್ತಮೌಜಸ್. ಇವರಿಬ್ಬರೂ ದ್ರುಪದನ ಮಕ್ಕಳು. ಧೃಷ್ಟದ್ಯುಮ್ನನ ಸೋದರರು. ದ್ರೌಪದಿಯಿಂದಾಗಿ ಇವರೂ ಆ ಕಡೆಗೆ ಸೇರುವುದು ಅನಿವಾರ್ಯವಾಯಿತು ಎನ್ನುವ ಹಿನ್ನಲೆಯನ್ನು ಈ ಮೊದಲೇ ನೊಡಿದ್ದೇವೆ.

ದುರ್ಯೋಧನಿಗೆ ದ್ರುಪದನ ಮೇಲೆ ವಿಶೇಷ ಕಣ್ಣಿತ್ತು. ಅದಕ್ಕೇ ಅವನ ಮೂರು ಮಕ್ಕಳನ್ನೂ ಉಲೇಖಿಸಿದ್ದಾನೆ. ದ್ರುಪ್ಪದನಿಗೆ ಮೂವರೇ ಮಕ್ಕಳೇನೂ ಅಲ್ಲ, ಆದರೆ ಅವರಲ್ಲಿ ಪ್ರಮುಖರಾದವರು ಮೂವರು. ಧೃಷ್ಟದ್ಯುಮ್ನ, ಯುಧಾಮನ್ಯು ಮತ್ತು ಉತ್ತಮೌಜಸ್. ಧೃಷ್ಟದ್ಯುಮ್ನನಂತೂ ಸೇನಾಪತಿಯಾಗಿ ಮೊದಲೇ ಉಲ್ಲೇಖಗೊಂಡಿದ್ದಾನೆ. ಉಳಿದ ಇಬ್ಬರು ಈ ಶ್ಲೋಕದಲ್ಲಿ ಉಲೇಖಿತರಾಗಿದ್ದಾರೆ. ಬರಿಯ ದ್ರುಪದನ ಮಕ್ಕಳೆಂದೇ ಇವರು ಉಲ್ಲೇಕಗೊಂಡಿಲ್ಲ; ಬದಲಾಗಿ ಸ್ವಂತ ಪರಾಕ್ರಮದಿಂದಲೇ ಇವರು ಅಪಾಯಕಾರಿ ವ್ಯಕ್ತಿಗಳು ಎನ್ನುವ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುವುದಕ್ಕಾಗಿಯೇ ದುರ್ಯೋಧನ ಇವರಿಬ್ಬರಿಗೂ ಪ್ರತ್ಯೇಕವಾಗಿ ಎರಡು ವಿಶೇಷಣಳನ್ನು ನೀಡಿದ್ದಾನೆ. ವಿಕ್ರಾಂತನಾದ ಯುಧಾಮನ್ಯು ಮತ್ತು ವೀರ್ಯವಂತನಾದ ಉತ್ತಮೌಜಸ್. ಇಬ್ಬರೂ ಮಹಾವಿಕ್ರಮಶಾಲಿಗಳು, ಮಹಾವೀರರು. ಅದರಿಂದ ಒಂದೇ ಕುಟುಂಬಕ್ಕೆ ಸೇರಿದ್ದರೂ ಪ್ರತ್ಯೇಕವಾಗಿ ಉಲ್ಲೇಖಕ್ಕೆ ಅರ್ಹರು ಎಂದು ದುರ್ಯೋಧನ ಭಾವಿಸಿದ.

ಹೀಗೆ ಹನ್ನೊಂದು ಮಂದಿ ಮಹಾವೀರರನ್ನು ಪಾಂಡವರ ಸೇನೆಯಲ್ಲಿ ಗುರುತಿಸಿದ ದುರ್ಯೋಧನ ಎಳೆಯರಾದ ಪಾಂಡವರ ಮಕ್ಕಳ ಬಗ್ಗೆ ತನ್ನ ಭಯವನ್ನು ಮುಂದಿನ ಮಾತಿನಲ್ಲಿ ವ್ಯಕ್ತಪಡಿಸುತ್ತಾನೆ– **"ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ"**

ಸುಭದ್ರೆಯ ಮಗ ಅಭಿಮನ್ಯು ಮತ್ತು ದ್ರೌಪದಿಯ ಐವರು ಮಕ್ಕಳು. ವಯಸ್ಸಿನಲ್ಲಿ ಎಳೆಯರಾದರೂ ಅವರು ಯಾವ ಮಹಾರಥರಿಗೂ ಕಮ್ಮಿ ಇಲ್ಲ. ಆದ್ದರಿಂದ ಅವರ ಬಗ್ಗೆಯೂ ನಾವು ಅಲಕ್ಷ್ಯ ಮಾಡುವಂತಿಲ್ಲ ಎನ್ನುವ ಭಯವನ್ನು ದುರ್ಯೋಧನ ಇಲ್ಲಿ ವ್ಯಕ್ತಪಡಿಸಿದ್ದಾನೆ.

ಸುಭದ್ರೆಯ ಮಗ ಅಭಿಮನ್ಯು ಸುಮಾರು ಹದಿನಾರರ ಹರೆಯದವ. ಇನ್ನು ದ್ರೌಪದಿಯ ಪಂಚಪುತ್ರರಲ್ಲಿ ಧರ್ಮರಾಜನ ಮಗ ಪ್ರತಿವಿಂಧ್ಯ ಹದಿನೆಂಟರ ಅಂಚಿನಲ್ಲಿ ಇರುವವ. ಭೀಮಸೇನನ ಮಗ ಸುತಸೋಮ ಹದಿನೇಳರ ಹುಡುಗ. ಅರ್ಜುನನ ಮಗ ಶ್ರುತಕೀರ್ತಿ ಅಭಿಮನ್ಯುವಿಗಿಂತ ಕಿರಿಯವ. ಅವನ ವಯಸ್ಸು ಸುಮಾರು ಹದಿನಾರು. ನಕುಲನ ಮಗ ಶತಾನೀಕ ಮತ್ತು ಸಹದೇವನ ಮಗ ಶ್ರುತಕರ್ಮ ಹದಿನಾಲ್ಕು ಹದಿನೈದು ವಯಸ್ಸಿನ ಎಳೆಯರು.

ಹೀಗೆ ಪಾಂಡವರ ಕಡೆಯ ಎಳೆಯ ಹುಡುಗರನ್ನೂ ಮಹಾರಥರು ಎಂದು, ತಮ್ಮ ಹನ್ನೊಂದು ಅಕ್ಷೋಹಿಣಿ ಸೇನೆಯನ್ನು ಎದುರಿಸಬಲ್ಲ ವೀರರು ಎಂದು ಉಲ್ಲೇಖಿಸುವ ದುರ್ಯೋಧನನ ಬಗೆಯಾಳದ ಗಾಬರಿ ನಿಜಕ್ಕೂ ಗಾಬರಿ ಬರಿಸುವಂತಹದು. ಪಾಂಡವರ ಕಡೆಯ ಒಬ್ಬೊಬ್ಬ ವೀರನೂ, ಅವನು ಎಷ್ಟು ಸಣ್ಣವನೇ ಇರಲಿ ದುರ್ಯೋಧನನ ಕಣ್ಣಿಗೆ ಭೀಮಾರ್ಜುನರಂತೆ ಕಾಣತೊಡಗಿದ್ದಾರೆ ಎನ್ನುವುದಕ್ಕೆ ಬೇರೆ ನಿದರ್ಶನ ಬೇಡ. ದುರ್ಯೋಧನನ ವಿಷಾದ ಈ ಮಾತಿನಲ್ಲಿ ಮುಗಿಲನ್ನು ಮುಟ್ಟಿದೆ.

ಈ ಪದ್ಯದಲ್ಲಿ ಬಂದ "ಸರ್ವ ಏವ" (ಎಲ್ಲರೂ) ಎನ್ನುವ ಮಾತಿನಲ್ಲಿ ಇನ್ನೂ ಒಂದು ಧ್ವನಿದೆ. ಇಲ್ಲಿ ಹೇಳಿದ ಎಲ್ಲರೂ ಮಾತ್ರವೇ ಅಲ್ಲ, ತಾನು ಹೇಳಿದ ಹೇಳದ ಎಲ್ಲರೂ ಮಹವೀರರೆ. ಪಾಂಡವರ ಸೇನೆಯಲ್ಲಿ ಮಹಾವೀರನಲ್ಲದವ ಒಬ್ಬನೂ ಇಲ್ಲ ಎನ್ನುವಂತೆ ದುರ್ಯೋಧನ ಈ ಮಾತನ್ನಾಡಿದ್ದಾನೆ.

ಈ ಮಾತನ್ನು ಇನ್ನೊಂದು ರೀತಿಯಲ್ಲಿ ಅರ್ಥೈಸಬಹುದು. ಅಭಿಮನ್ಯು, ಪಂಚ ದ್ರೌಪದೇಯರು ಮಾತ್ರವೇ ಅಲ್ಲ, ಪಾಂಡವರ ಉಳಿದ ಮಕ್ಕಳೂ ಎಲ್ಲರೂ ಮಹಾರಥರೇ. ಯಾರನ್ನು ಅಲಕ್ಷಿಸುವಂತಿಲ್ಲ ಎನ್ನುವ ಭಾವವೂ ಈ ಮಾತನ್ನಾಡುವಾಗ ದುರ್ಯೋಧನನ ಮನಸ್ಸಿನಲ್ಲಿ ಸುಳಿದುಹೋಗಿರಬೇಕು. ಸೌಭದ್ರ, ದ್ರೌಪದೇಯರ ಜೊತೆಗೆ 'ಎಲ್ಲರೂ' ಎಂದಾಗ ಪ್ರಾಯಃ ದುರ್ಯೋಧನನ ಮನಸ್ಸಿನಲ್ಲಿ ಮುಖ್ಯವಾಗಿ ಸುಳಿದ ಹೆಸರುಗಳಿವು– ಭೀಮಸೇನನ ಮಕ್ಕಳಾದ ಶರ್ವತ್ರಾತ, ಸರ್ವೋತ್ತುಂಗ ಮತ್ತು ಘಟೋತ್ಕಚ; ಘಟೋತ್ಕಚನ ಮಗನಾದ ನಿಷ್ಟ್ಯ; ಅರ್ಜುನನ ಮಗನಾದ ಇರಾವಂತ. ಹೀಗೆಯೆ ಇವರೆಲ್ಲರೂ 'ಸರ್ವ ಏವ ಮಹಾರಥಾಃ'.

ಪಾಂಡವರ ಮಕ್ಕಳನ್ನು ಹೀಗೆ ಬಿಡಿಬಿಡಿಯಾಗಿ ಉಲ್ಲೇಖಿಸುವ ದುರ್ಯೋಧನ ತನ್ನ ಸೇನೆಯ ಪ್ರಮುಖರನ್ನು ಪರಿಗಣಿಸುವಾಗ ತಾವು ನೂರು ಮಂದಿ ಸೋದರರ ಮಕ್ಕಳಲ್ಲಿ ಒಬ್ಬನನ್ನೂ ಉಲ್ಲೇಖಿಸದಿರುವುದು ಗಮನಾರ್ಹ. ಹೀಗೆ ಈ ಮೂರು ಶ್ಲೋಕಗಳು ದುರ್ಯೋಧನನ ಮನಃಸ್ಥಿತಿಗೆ ಹಿಡಿದ ಕೈಗನ್ನಡಿಯಂತಿವೆ.

* * * * * *

**ಲೇಖಾಂಕ: ೧೩**

# ಭಗವದ್ಗೀತೆ

**–ಬನ್ನಂಜೆ ಗೋವಿಂದಾಚಾರ್ಯ**

ಪಾಂಡವರ ಕಡೆಯ ಮಹಾವೀರರನ್ನು ದ್ರೋಣನ ಬಳಿ ಬಣ್ಣಿಸಿದ ದುರ್ಯೋಧನ ಮುಂದಿನ ಪದ್ಯದಲ್ಲಿ ತಮ್ಮ ಕಡೆಯ ವೀರರ ಬಗ್ಗೆ ಪ್ರಸ್ತಾವಿಸುತ್ತಾನೆ–

**ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ ನಿಭೋಧ ದ್ವಿಜೋತ್ತಮ ।**
**ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ ಬ್ರವೀಮಿ ತೇ ॥೭॥**

[ದ್ವಿಜೋತ್ತಮರಾದ ದ್ರೋಣಾಚಾರ್ಯರೇ, ತಮ್ಮ ಕಡೆಯಲ್ಲಿ ವಿಶಿಷ್ಟರಾದವರು, ನನ್ನ ಸೈನ್ಯದ ನಾಯಕರಾದವರು ಯಾರು ಎನ್ನುವುದನ್ನು ಅರಿತುಕೊಳ್ಳಿ. ಗುರುತಿಗಾಗಿ ಅವರ ಹೆಸರುಗಳನ್ನು ಹೇಳುತ್ತೇನೆ.]

ಇಲ್ಲಿ ದುರ್ಯೋಧನ ದ್ರೋಣರನ್ನು 'ದ್ವಿಜೋತ್ತಮ' ಎಂದು ಸಂಬೋಧಿಸುತ್ತಾನೆ. 'ದ್ವಿಜ' ಎಂದರೆ ಉಪನಯನ ಸಂಸ್ಕಾರದಿಂದ ಎರಡನೇ ಬಾರಿ ಹುಟ್ಟಿದವನು; ಮರುಜನ್ಮ ಪಡೆದವನು– "ಮಾತುರಗ್ರೇಽಭಿಜನನಂ ದ್ವಿತೀಯಂ ಮೌಂಜಿ ಬಂಧನಾತ್". ಶಾಸ್ತ್ರ ಸಂಪ್ರದಾಯದಂತೆ ಬ್ರಾಹ್ಮಣರು, ಕ್ಷತ್ರಿಯರು ಮತ್ತು ವೈಶ್ಯರು ಉಪನಯ ಸಂಸ್ಕಾರಕ್ಕೆ ಅರ್ಹರು. ವೇದಾಧ್ಯಯನಕ್ಕೆ ಅಧಿಕಾರಿಗಳು. ಅದರಿಂದ ದ್ವಿಜರು. ಈ ಮೂವರು ದ್ವಿಜರಲ್ಲಿ ಮೊದಲನೆಯವನಾದ ಬ್ರಾಹ್ಮಣ ಉತ್ತಮಾಧಿಕಾರಿ. ಕ್ಷತ್ರಿಯರು ಮತ್ತು ವೈಶ್ಯರು ವೇದಾಧ್ಯಯನಕ್ಕೆ ಮಾತ್ರ ಅಧಿಕಾರಿಗಳಾದರೆ ಬ್ರಾಹ್ಮಣನು ಅಧ್ಯಯನ, ಅಧ್ಯಾಪನ ಎರಡಕ್ಕೂ ಅಧಿಕಾರಿ. ಆದ್ದರಿಂದ ಅವನು 'ದ್ವಿಜೋತ್ತಮ' ಎಂದೆನಿಸಿಕೊಳ್ಳುತ್ತಾನೆ.

ಭರದ್ವಾಜ ಮುನಿಯ ಮಕ್ಕಳಾದ, ದೇವಗುರು ಬೃಹಸ್ಪತ್ಯಾಚಾರ್ಯರ ಅಂಶಸಂಭೂತರಾದ ಆಚಾರ್ಯ ದ್ರೋಣರು ನಿಸ್ಸಂಶಯವಾಗಿಯೂ ದ್ವಿಜೋತ್ತಮರು. ಅವರು ದ್ವಿಜರಲ್ಲಿ ಉತ್ತಮರು ಮಾತ್ರವಲ್ಲ, ಬ್ರಾಹ್ಮಣರಲ್ಲಿಯೂ ಉತ್ತಮ ಬ್ರಾಹ್ಮಣರು. ಆದರೆ ದುರ್ಯೋಧನನ ಈ ಸಂಬೋಧನೆಯಲ್ಲಿ ಗೌರವದ ಜೊತೆಗೆಯೇ ಕೊಂಚ ನಂಜೂ ಬೆರೆತಂತಿದೆ.

ನಾವು ಈ ಹಿಂದೆಯೇ ನೋಡಿದಂತೆ ದ್ವಿಜೋತ್ತಮ ಎಂದರೆ ವೇದದ ಅಧ್ಯಯನ ಅಧ್ಯಾಪನಗಳಲ್ಲಿ ನಿರತನಾದವನು. ಯುದ್ಧದ ಈ ಸಂದರ್ಭದಲ್ಲಿ ದುರ್ಯೋಧನ ಬೇಕೆಂದೆ ಛೇಡಿಸುವಂತೆ ಈ ಮಾತನ್ನು ಬಳಸುತ್ತಾನೆ. "ನೀವು ವೇದ ಓದಿ ಯಜ್ಞಯಾಗ ಮಾಡುವ ಮಂದಿ. ನಿಮಗೆ ಯುದ್ಧದ ಕ್ಷಾತ್ರದಲ್ಲಿ ಸಹಜ ಆಸಕ್ತಿ ಹೇಗಾದರೂ ಬಂದೀತು? ನೀವು ನಮ್ಮ ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ಇಲ್ಲಿ ನಿಂತವರು ಎನ್ನುವ ಭಾವ ಈ ಮಾತಿನಲ್ಲಿದ್ದಂತಿದೆ. ಮುಂದೆ ಇಡಿಯ ಪದ್ಯವೇ ಯುದ್ಧದ ಸಿದ್ಧತೆಯ ಬಗ್ಗೆ ದ್ರೋಣರಂಥವರ ಮುಂಜಾಗರೂಕತೆ ಸಾಲದು ಎನ್ನುವ ಎಚ್ಚರವನ್ನೇ

ಧ್ವನಿಸುವುದರಿಂದ ಈ ಸಂಬೋಧನೆಯು ಅನಿವಾರ್ಯವಾಗಿ ಅದಕ್ಕೆ ಅನುಗುಣವಾಗಿ ಅರ್ಥಧ್ವನಿಯಲ್ಲಿಯೇ ಪರ್ಯವಸಾನಗೊಳ್ಳುತ್ತದೆ.

ಪದ್ಯದ ಮೊದಲ ಎರುಡು ಪದಗಳು– 'ಅಸ್ಮಾಕಂ ತು'. 'ಅಸ್ಮಾಕಂ' ಎಂದರೆ ನಮ್ಮ ಕಡೆಯವರು. ಇದಕ್ಕೆ 'ತು' ಎಂಬ ಅವ್ಯಯ ಪದವನ್ನು ಸೇರಿಸಿದಾಗ ಇದಕ್ಕೊಂದು ಹೊಸ ಅರ್ಥಧ್ವನಿ ಬರುತ್ತದೆ. ಕನ್ನಡದಲ್ಲಿ  ಇನ್ನು ನಮ್ಮವರೋ! ಅವರ ಕಥೆ ಏನು ಹೇಳುವುದು  ಎನ್ನುವಂತೆ.

ತಮ್ಮ ಕಡೆಯವರಿಗೆ ದುರ್ಯೋಧನ ಎರಡು ವಿಶೇಷಣಗಳನ್ನು ನೀಡುತ್ತಾನೆ. ಒಂದು 'ವಿಶಿಷ್ಟಾಃ', ಇನ್ನೊಂದು  ಮಮ 'ಸೈನ್ಯಸ್ಯ ನಾಯಕಾಃ'. ನನ್ನ ಸೈನ್ಯದ ಮುಂಚೂಣಿಯಲ್ಲಿರುವ ಮುಖಂಡರು. ಅದರಲ್ಲೂ ಮುಖ್ಯರಾದವರು ಎಂದು ಈ ಮಾತಿನ ಅರ್ಥ. ಮೇಲುನೋಟಕ್ಕೆ ಈ ಮಾತು ಸಹಜವಗಿಯೇ ಇದೆ. ಆದರೆ ಆಳಕ್ಕೆ ಇಳಿದಾಗ ಈ ಮಾತು ಹಲವು ಪದರುಗಳಲ್ಲಿ ಹೊಸ ಅರ್ಥದಲ್ಲಿ ತೆರೆದು ಕೊಳ್ಳುತ್ತದೆ. ಪಾಂಡವರ ಕಡೆಯ ಸಿದ್ಧತೆಯನ್ನು ಹಿಂದೆ ಉಲೇಖಿಸಿದಾಗ ಪಾಂಡವಾನಾಂ ಚಮೂಂ  ಪಾಂಡವರ ಸೇನೆ ಎಂದಿದ್ದ. ಇಲ್ಲಿ  ಮಮ ಸೈನ್ಯಸ್ಯ ನಾಯಕಾಃ – ನನ್ನ ಸೇನೆಯ ನಾಯಕರು ಎನ್ನುತ್ತಾನೆ. ಈ ಎರಡು ಪ್ರಯೋಗಗಳಲ್ಲಿರುವ ವ್ಯತ್ಯಾಸದ ಸೂಕ್ಷ್ಮವನ್ನು ಗಮನಿಸಬೇಕು. ಅಲ್ಲಿ ಸಮಷ್ಟಿಯಾಗಿ ಸೇನೆಯನ್ನು ಉಲೇಖಿಸಿದರೆ ಇಲ್ಲಿ ಸೇನೆಯ ನಾಯಕರನ್ನು ಮಾತ್ರವೇ ಉಲೇಖಿಸುತಾನೆ. ಅಲ್ಲಿ ಪಾಂಡವರೆಲ್ಲರ ಸೇನೆ ಎಂದಿದ್ದರೆ ಇಲ್ಲಿ ತನ್ನ ತಮ್ಮಂದಿರನ್ನು ಯಾರನ್ನೂ ಉಲ್ಲೆಖಿಸದೆ ವ್ಯಷ್ಟಿಯಾಗಿ  ನನ್ನ ಸೇನೆ  ಎನ್ನುತ್ತಾನೆ. ಇಲ್ಲಿ ದುರ್ಯೋಧನನ ಅಹಂಕಾರವೂ ಇದೆ, ಅನಾಥಪ್ರಜ್ಞೆಯೂ ಇದೆ.

ವಾಸ್ತವವಾಗಿ ಅವನು ದ್ರೋಣರಂತಹ ಹಿರಿಯರ ಮುಂದೆ ಮಾತನಾಡುವಾಗ 'ನಮ್ಮ ಸೇನೆ' ಎಂದು ಹೇಳಬೇಕಿತ್ತು. 'ನನ್ನ ಸೇನೆ' ಎನ್ನುವುದು ತೀರ ಅವಿನಯದ ಮಾತಾಯಿತು. ಇಂತಹ ಅವಿನಯ, ಅಹಂಕಾರ ದುರ್ಯೋಧನನ ಸಹಜ ಗುಣವೇ ಅದದ್ದರಿಂದ ಅದರ ಬಗ್ಗೆ ನಾವು ತಲೆಕೆಡಿಸಿಕೊಳ್ಳಬೇಕಾಗಿಲ್ಲ. ಆದರೆ ಈ ಪದಗಳಿಂದ ಧ್ವನಿತವಾಗುವ ಅನಾಥಪ್ರಜ್ಞೆ ಮಾತ್ರ ಅಸಾಧಾರಣವಾದದ್ದು.

ಅವನು ಎಲ್ಲವನ್ನೂ ಆತ್ಮಕೇಂದ್ರಿತವಾಗಿ ಯೋಚಿಸುತಿದ್ದಾನೆ. ಅವನಿಗೆ ಯಾರಮೇಲೂ ನಂಬುಗೆಯಿಲ್ಲ. ಈ ನಿರ್ಧಾರದಲ್ಲಿ ಅವನು ಏಕಾಕಿ ಅಸಹಾಯ ಎನ್ನುವಂತೆ ಅವನೀಗ ಗಲಿಬಿಲಿಗೊಂಡಿದ್ದಾನೆ. ತನ್ನ ಹತ್ತಿರದವರಾದರೂ ಕೊನೆಯತನಕ ತನ್ನ ನಿಲುವನ್ನು ಸಮರ್ಥಿಸುತ್ತಾರೆ ಎಂದು ಏನು ಭರವಸೆ? ಸಮರ್ಥಿಸಿದರೂ ಅದು ತನ್ನ ದಾಕ್ಷಿಣ್ಯಕ್ಕಾಗಿ. ಹೀಗಾಗಿ ಈ ಜಿದ್ದು, ಈ ಹೋರಾಟ, ಈ ಸೇನೆ ಎಲ್ಲವೂ ತನಗೆ ಮಾತ್ರ ಸಂಬಂಧಪಟ್ಟದ್ದು. ಇದು ಪ್ರೀತಿಯ ನಂಟು ಅಲ್ಲ. ದಾಕ್ಷಿಣ್ಯದ ಗಂಟು. ಯಾವಾಗ ಗಂಟು ಹರಿಯುತ್ತೊ ಹೇಳಲಾಗುವುದಿಲ್ಲ.

ಅದಕ್ಕೆಂದೇ ಅವನು ಸೈನ್ಯವನ್ನು ಬಿಟ್ಟು ಸೈನ್ಯದ ನಾಯಕರನ್ನಷ್ಟೇ ಉಲ್ಲೇಖಿಸುತ್ತಾನೆ. ಈ ಸೇನೆ ತನ್ನ ಸಮಸ್ಯೆಯನ್ನು ಅರ್ಥಮಾಡಿಕೊಂಡು ತನಗೆ ನೆರವೀಯಲೆಂದು ಪ್ರೀತಿಯಿಂದ ಬಂದ ಸೇನೆಯಲ್ಲ. ಬದಲಾಗಿ ತಮ್ಮ ನಾಯಕರ ಆದೇಶಕ್ಕೆ ಬಲಿಬಿದ್ದು ಉಪಾಯವಿಲ್ಲದೆ ನಾಯಕರ ಬೆನ್ನುಹತ್ತಿದ ಬಾಲ. ನಾಯಕರಾದರೂ ತನ್ನ ಮೇಲಿನ ಪ್ರೀತಿಯಿಂದಲೇ ಬಂದಿದ್ದಾರೆಯೇ? ಅದೂ ಖಚಿತವಾಗಿ ಹೇಳುವಂತಿಲ್ಲ. ಕೆಲವರು ಅನ್ನದ ಋಣಕ್ಕಾಗಿ ನಿಂತಿದ್ದಾರೆ. ಕೆಲವರು ಯಾರುಯಾರದೋ ದಾಕ್ಷಿಣ್ಯಕ್ಕಾಗಿ ಬಂದಿದ್ದಾರೆ. ಕೆಲವರು ಪಾಂಡವರ ಮೇಲಿನ ಹಗೆಯಿಂದ ಬಂದಿದ್ದಾರೆ.

ಈ ಮುಖವನ್ನೇ ಇನ್ನಷ್ಟು ಸ್ಪಷ್ಟೀಕರಿಸುವ ಮಾತು 'ವಿಶಿಷ್ಟಾಃ' ಎಂಬುದು. ತನ್ನ ಕಡೆಗೆ ಬಂದ ಅನೇಕ ಕ್ಷತ್ರಿಯರು ಯುದ್ಧ ಸಾಮರ್ಥ್ಯದಲ್ಲಿ, ಸೇನಾಬಲದಲ್ಲಿ, ತೋಳುಬಲದಲ್ಲಿ ವಿಶಿಷ್ಟರು, ಹೆಚ್ಚಿನ ಖ್ಯಾತಿ ಪಡೆದವರು ಎನ್ನುವುದು ನಿರ್ವಿವಾದ. ಆದರೂ ಅವರಿಂದ ತನಗೆ ಹೆಚ್ಚಿನ ಉಪಯೋಗ ಬಿದ್ದೀತು ಎನ್ನುವ ಭರವಸೆಯನ್ನು ದುರ್ಯೋಧನ ಈಗಾಗಲೇ ಕಳೆದುಕೊಂಡಿದ್ದಾನೆ. ಅವರು ವಿಶಿಷ್ಟ ವ್ಯಕ್ತಿಗಳಾಗಿದ್ದೂ ಆಯತ್ತಕಾಲದಲ್ಲಿ ತನ್ನ ಉಪಯೋಗಕ್ಕೆ ಬೀಳುತ್ತಿಲ್ಲ ಎನ್ನುವುದೇ ದುರ್ಯೋಧನನ ಮನಸ್ಸಿನಲ್ಲಿರುವ ನಿಜವಾದ ವೈಶಿಷ್ಟ್ಯ. ಈ ಮಾತು ಮುಂದಿನ ಶ್ಲೋಕದಲ್ಲಿ ಇನ್ನಷ್ಟು ಸ್ಫುಟವಾಗುತ್ತದೆ.

ಅದಕ್ಕೆಂದೆ ದುರ್ಯೋಧನ ದ್ರೋಣರನ್ನು ಎಚ್ಚರಿಸುತ್ತಾನೆ– 'ತಾನ್ನಿಬೋಧ'. 'ಅಂತಹ ವಿಶಿಷ್ಟ ಪರಿಸ್ಥಿತಿಯ ನಾಯಕರನ್ನು ನಿಮಗೂ ತಿಳಿಸುತ್ತೇನೆ; ಪರಿಸ್ಥಿತಿಯನ್ನು ಸ್ವಲ್ಪ ಅರ್ಥಮಾಡಿಕೊಳ್ಳಿ' ಎನ್ನುವುದು ಈ ಮತಿನ ಭಾವ. ದ್ರೋಣರಂತಹ ಹೊಣೆಗಾರರಾದ ಹಿರಿಯ ನಾಯಕರೂ ಪರಿಸ್ಥಿತಿಯ ಗಂಭೀರತೆಯನ್ನು ಅರ್ಥಮಾಡಿಕೊಳ್ಳದೆ ಒಳ್ಳೆಯ ವೈದಿಕ ಬ್ರಾಹ್ಮಣರಂತೆ ನಿರಾಳವಾಗಿ ಎಚ್ಚರಗೇಡಿಗಳಂತೆ ಕೂತಿದ್ದಾರಲ್ಲಾ! ಎಂತಹ ದುರ್ದೈವ! ಎಂದು ದುರ್ಯೋಧನ ಒಳಗಿಂದೊಳಗೆಯೇ ಕೊರುಗುತ್ತಾನೆ. ಈ ಕೊರಗು ದ್ರೋಣರಿಗೆ ನಾಟುವಷ್ಟು ಸ್ಪಷ್ಟವಾಗಿ ಅವನ ಮಾತಿನಲ್ಲಿ ಮೂಡಿದೆ.

ಪದ್ಯದ ಕೊನೆಯ ಚರಣದಲ್ಲಿ ಈ ಮಾತು ಇನ್ನಷ್ಟು ಸ್ಫುಟವಾಗಿ ಮೂಡಿಬಂದಿದೆ. 'ಸಂಜ್ಞಾರ್ಥಂ ತಾನ್ ಬ್ರವೀಮಿ ತೇ' "ನಮ್ಮ ನಾಯಕರ ಹೆಸರು ನಿಮಗೂ ತಿಳಿದಿರಲಿ ಎಂದು ಹೇಳುತ್ತೇನೆ" ಹಾಗಾದರೆ ದುರ್ಯೋಧನನ ಭಾವವೇನು? ತಮ್ಮ ಪಕ್ಷದ ನಾಯಕರ ಹೆಸರೂ ದ್ರೋಣರಿಗೆ ಗೊತ್ತಿಲ್ಲವೆಂದೇ? ವಸ್ತುಸ್ಥಿತಿ ಹಾಗಲ್ಲ. ಸಂಗತಿ ಗೊತ್ತಿದ್ದೂ ದ್ರೋಣರು ಅದನ್ನು ಗಂಭೀರವಾಗಿ ಪರಿಗಣಿಸುತ್ತಿಲ್ಲ ಎನ್ನುವುದು ದುರ್ಯೋಧನನ ಆಕ್ಷೇಪ. ಈ ಪದ್ಯದ ಒದೊಂದು ಪದವೂ ದುರ್ಯೋಧನನ ಈ ನಂಜಿಗೆ ಶ್ರುತಿಗೂಡುತ್ತದೆ.

* * * * * *

**ಲೇಖಾಂಕ: ೧೪**

# ಭಗವದ್ಗೀತೆ

### –ಬನ್ನಂಜೆ ಗೋವಿಂದಾಚಾರ್ಯ

ಮುಂದಿನ ಶ್ಲೋಕದಲ್ಲಿ ದುರ್ಯೋಧನನು ತನ್ನ ಕಡೆಯ ಪ್ರಮುಖರನ್ನು ಉಲ್ಲೇಖಿಸುತ್ತಾನೆ–

**ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ ।**
**ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವಚ ॥ ೮ ॥**

[ನೀವು (ದ್ರೋಣಾಚಾರ್ಯರು), ಭೀಷ್ಮರು, ಯುದ್ಧವಿಜಯಿಗಳಾದ ಕೃಪಾಚಾರ್ಯರು, ಅಶ್ವತ್ಥಾಮ, ವಿಕರ್ಣ, ಮತ್ತು ಸೋಮದತ್ತ, ಪುತ್ರನಾದ ಭೂರಿಶ್ರವಸ್].

ಪಾಂಡವರ ಪಕ್ಷದಲ್ಲಿ ಹನ್ನೊಂದು ಮಂದಿ ಮತ್ತು ಸಮಷ್ಟಿಯಾಗಿ ೧೮ ಮಂದಿ ವೀರರನ್ನು ಹೇಳಿದ ದುರ್ಯೋಧನ ತನ್ನ ಕಡೆಯ ಏಳೇ ಮಂದಿಯನ್ನು ಉಲೇಖಿಸುತ್ತಾನೆ. ಅದರಲ್ಲೂ ಹೆಚ್ಚಿನವರು ತನ್ನ ಬಳಿಯೇ ಇರುವವರು. ಇತರ ರಾಜ್ಯಗಳಿಂದ ಸೇನಾಸನ್ನದ್ಧರಾಗಿ ಬಂದವರಲ್ಲ. ಪಾಂಡವರ ಮಕ್ಕಳನ್ನು ಪ್ರತಿಯೊಬ್ಬರನ್ನೂ ಮಹಾರಥರೆಂದು ಉಲೇಖಿಸಿದ ದುರ್ಯೋಧನ ತನ್ನ ಮಕ್ಕಳ ಬಗ್ಗೆ, ವೀರರಾದ ಸೋದರರು ದುಃಶಾಸನಾದಿಗಳ ಬಗ್ಗೆ ಚಕಾರವೆತ್ತದೆ ದಿವ್ಯನಿರ್ಲಕ್ಷ್ಯವನ್ನು ತೋರ್ಪಡಿಸುತ್ತಾನೆ. ಅಷ್ಟು ಮಂದಿ ಸೋದರರು ಮತ್ತು ಮಕ್ಕಳು ಇದ್ದರೂ ಲೆಕ್ಕಕ್ಕೆ ಇಲ್ಲ ಎನ್ನುವಂತೆ ಅನಾದರದಿಂದ ಅವರನ್ನು ಕಡೆಗಣಿಸಿ ಉಲ್ಲೇಖಿಸದೆ ಬಿಡುತ್ತಾನೆ. ದುರ್ಯೋಧನನ ಮಾನಸಿಕ ತುಮುಲಗವನ್ನು ಗುರುತಿಸುವಲ್ಲಿ ಇದು ಬಹಳ ಮಹತ್ವದ ಸಂಗತಿಯಾಗುತ್ತದೆ.

ಅವನು ಉಲ್ಲೇಖಿಸಿದ ಏಳು ಮಂದಿಯಾದರೂ ಎಂಥವರು? ಅವರ ಬಗ್ಗೆ ಅವನ ಮನಸ್ಸಿನಲ್ಲಿರುವ ಭಾವ ಎಂತಹದು ಎನ್ನುವುದು ಅವನು ಹೆಸರಿಸಿದ ರೀತಿಯನ್ನು ನೋಡಿದರೆ ಸ್ಪಷ್ಟವಾಗುತ್ತದೆ.

ಮೊದಲನೆಯದಾಗಿ ಅವನು ಹೆಸರಿಸಿದ ಒಟ್ಟು ಏಳುಮಂದಿಯಲ್ಲಿ ಮೂವರು ಕ್ಷತ್ರಿಯರಲ್ಲ. ಬ್ರಾಹ್ಮಣರು: ದ್ರೋಣಾಚಾರ್ಯರು, ದ್ರೋಣಪುತ್ರನಾದ ಅಶ್ವತ್ಥಾಮ ಮತ್ತು ದ್ರೋಣರ ಭಾವನಂಟನಾದ ಕೃಪಾಚಾರ್ಯರು. ಒಂದೇ ಕುಟುಂಬಕ್ಕೆ ಸೇರಿದ ಈ ಬ್ರಾಹ್ಮಣರು ಯುದ್ಧವಿದ್ಯೆಯಲ್ಲಿ ಪರಿಣತರಾದರೂ ಯುದ್ಧ ಅವರ ಸಹಜಧರ್ಮವಲ್ಲ. ಮೂವರು ದುರೋಧನನ ಆಶ್ರಯದಲ್ಲಿ ಬದುಕಿದವರು. ಆವನ ಆಸರೆಯ ಹಂಗಿಗಾಗಿ ಯುದ್ಧಕ್ಕೆ ನಿಂತವರು. ಆದ್ದರಿಂದಲೇ ಅವರಿಂದ ಪ್ರಾಮಾಣಿಕವಾಗಿ ತಾನು ವಿಜಯವನ್ನು ನಿರೀಕ್ಷಿಸುವಂತಿಲ್ಲ. ಇದು ದುರ್ಯೋಧನನ ಮನಸ್ಸಿನಲ್ಲಿ ಇರುವ ಭಾವ.

ಈ ಮಾತನ್ನು ಇನಷ್ಟು ಸ್ಫುಟಪಡಿಸಲು ಒಬ್ಬೊಬ್ಬರದ್ದೇ ಹಿನ್ನೆಲೆಯನ್ನು ನೋಡೋಣ. ಮೊದಲನೆಯ ಹೆಸರು ದ್ರೋಣಾಚಾರ್ಯರದ್ದು. ಇವರು ಪ್ರಾರಂಭದಿಂದಲೇ ಪಾಂಡವರ ಪಕ್ಷಪಾತಿಗಳು.

ಅರ್ಜುನನ್ನು ಬಿಲ್ಗಾರರಲ್ಲಿ ಅಗ್ರಗಣ್ಯನಾಗಿ ಮಾಡಲು ಪಣತೊಟ್ಟವರು. ಹಾಗೆ ಮಾಡಿದವರು ಕೂಡ. ಇಂಥವರು ಅರ್ಜುನನಿಗೆ ವಿರುದ್ಧವಾಗಿ, ಪಾಂಡವರ ವಿರುದ್ಧವಾಗಿ ಯುದ್ಧ ಮಾಡಿ ನಮಗೆ ವಿಜಯ ತಂದುಕೊಡುವುದು ಹೌದೇ? ಅದರ ಮೇಲೆ ಈ ಬ್ರಾಹ್ಮಣ ಶತಮಾನಗಳನ್ನು ಕಂಡ ಹಣ್ಣು ಮುದುಕ ಬೇರೆ.

ಎರದನೆಯ ಹೆಸರು ಕೃಪಾಚಾರ್ಯರದ್ದು. ಇವರೂ ಕೂಡ ದ್ರೋಣಾಚಾರ್ಯರಿಗಾಗಿ, ತನ್ನ ಸೋದರಿ ಕೃಪಿಯ ಸ್ನೇಹಕ್ಕಾಗಿ ಈ ಕಡೆಗೆ ನಿಂತವರು. ಅಂತರಂಗದಲ್ಲಿ ಪಾಂಡವರ ಪಕ್ಷಪಾತಿಗಳು. ಸಮಯ ಬಂದಾಗೆಲ್ಲ ಧೃತರಾಷ್ಟ್ರನ ಬಳಿ ಪಾಂಡವರ ಪರವಾಗಿ ವಾದ ಮಾಡಿದವರು. ಹೀಗೆ ಇವರು ಒಳಗಿಂದೊಳಗೆ ಪಾಂಡವರ ಗೆಲುವನ್ನು ಬಯಸುವ, ಪಾಂಡವರ ಗೆಲುವಿನಿಂದ ಖುಷಿಪಡುವ ಮುದಿ ಬ್ರಾಹ್ಮಣ.

ಮೂರನೆಯ ಹೆಸರು ಅಶ್ವತ್ಥಾಮನದು. ಇವನು ಪಾಂಡವರ ಪಕ್ಷಪಾತಿಯೇನೂ ಅಲ್ಲ. ಪಾಂಡವರನ್ನೂ ಕೃಷ್ಣನನ್ನೂ ಸ್ಪರ್ಧೆಯಿಂದ ದ್ವೇಷಿಸುತ್ತಿದ್ದವನು. ಆದರೂ ಇವನದು ಸಹಜವಾದ ಕ್ಷಾತ್ರವಲ್ಲ. ಏನಿದ್ದರೂ ಇವನದು ಚಪಲಬುದ್ಧಿಯ ಬ್ರಾಹ್ಮಣ. ಇವನ ಚಪಲಬುದ್ಧಿಗೆ ರೋಸಿಹೋದ ತಂದೆಯಿಂದಲೇ ಪರಿತ್ಯಕ್ತನಾದವನು. ಯುದ್ಧರಂಗದಲ್ಲಿ ನೆತ್ತರಕೋಡಿಯನ್ನು ಕಂಡು ಒಳಗಿನ ಬ್ರಾಹ್ಮ ಶಕ್ತಿ ಜಾಗೃತವಾಗಿ ನಡು ನೀರಿನಲ್ಲಿ ಕೈಬಿಟ್ಟು ಹೊರಟುಹೋದರೂ ಹೋದನೇ. ದುರ್ಯೋಧನ ಅಶ್ವತ್ಥಾಮನನ್ನು ಎಂದೂ ತನ್ನ ಅಂತರಂಗಕೂಟದಲ್ಲಿ ಸೇರಿಸಿಕೊಂಡವನಲ್ಲ. ಈಗ ಈ ಯುದ್ಧದ ನಿರ್ಣಾಯಕ ಪರಿಸ್ಥಿತಿಯಲ್ಲಿ ಈ ಮೂರು ಮಂದಿ ಬ್ರಾಹ್ಮಣರನ್ನೇ ತಾನು ನಂಬಬೇಕಾಯಿತಲ್ಲಾ! ತನ್ನ ಮನಸ್ಸಿನ ಈ ಹುಳುಕನ್ನು ದ್ರೋಣಾಚಾರ್ಯರಿಗೆ ನಾಟುವಷ್ಟು ಸ್ಪಷ್ಟವಾದ ಧ್ವನಿಯಲ್ಲಿ ದುರ್ಯೋಧನ ಈ ಶ್ಲೋಕದಲ್ಲಿ ವ್ಯಕ್ತಪಡಿಸಿದ್ದಾನೆ.

ಇನ್ನುಳಿದ ನಾಲ್ವರು ಕ್ಷತ್ರಿಯರಲ್ಲಿ ಮೊದಲನೆಯ ಹೆಸರು ಭೀಷ್ಮರದ್ದು. ಇವರು ಆ ಯುದ್ಧದಲ್ಲಿ ಪಾಲುಗೊಂಡ ವೀರರಲ್ಲೇ ಹಿರಿಯ ವಯೋವೃದ್ಧರು ಬಾಹ್ಲೀಕ ರಾಜನನ್ನೊಬ್ಬನನ್ನುಳಿದು. ಇವರು ಮನೆಯಜ್ಜ, ಮನೆತನದ ದಾಕ್ಷಿಣ್ಯಕ್ಕಾಗಿ ಧೃತರಾಷ್ಟ್ರನ ಮೋರೆ ನೋಡಿ ತನ್ನ ಕಡೆಗೆ ನಿಂತವರು. ಪಾಂಡವರಿಗೆ ರಾಜ್ಯ ಕೊಡದಿದ್ದರೆ ಕುರು ವಂಶ ಮಣ್ಣುಮುಕ್ಕಿ ಹೋಗುತ್ತದೆ ಎಂದು ಧೃತರಾಷ್ಟ್ರನ ಬಳಿ ವಾದಿಸಿದವರು. ಅಂತರಂಗದಲ್ಲಿ ತನ್ನನ್ನೂ ಕರ್ಣನನ್ನೂ ದ್ವೇಷಿಸುವವರು. ಪಾಂಡವರನ್ನು ಹೃದಯದಾಳದಿಂದ ಪ್ರೀತಿಸುವವರು. ಅವರನ್ನೇ ಸೇನಾಪತಿಪಟ್ಟದಲ್ಲಿ ಕೂಡಿಸಿ ದುರ್ಯೋಧನ ಪಾಂಡವರ ವಿರುದ್ಧ ಯುದ್ಧ ಮಾಡಬೇಕಾಗಿದೆ. ಅವನ ದುರ್ದೈವ ದೊಡದು. ಹೀಗೆ ತನ್ನನ್ನೇ ಹಳಿದುಕೊಳ್ಳುವಂತಿದೆ ಅವನ 'ಭೀಷ್ಮಶ್ಚ' ಎನ್ನುವ ಈ ಉದ್ಗಾರ.

ಐದನೆಯ ಹೆಸರು ಕರ್ಣನದ್ದು: 'ಕರ್ಣಶ್ಚ'. ವಾಸ್ತವವಾಗಿ ಕರ್ಣ ಪಾಂಡವರ ಬದ್ಧದ್ವೇಷಿ. ದುರ್ಯೋಧನನ ಅಂತರಂಗ ಮಿತ್ರ. ಕೌರವರ ಕ್ಷೇಮಚಿಂತನೆಗಾಗಿ ತನ್ನ ಬದುಕನ್ನೇ ಧಾರೆ ಯರೆದವನು. ದುರ್ಯೋಧನನ ಎಲ್ಲ ಷಡ್ಯಂತ್ರಗಳಲ್ಲಿ ಆಪ್ತ ಸಲಹೆಗಾರನಾಗಿದ್ದವನು. ದುರ್ಯೋಧನನ ವಿಜಯವನ್ನು ಪ್ರಾಮಾಣಿಕವಾಗಿ ಬಯಸಿದವನು. ಕೊನೆಯ ಕ್ಷಣದ ತನಕವೂ ದುರ್ಯೋಧನನ ಜೊತೆಗೆ ನಿಂತು ಹೋರಾಡಿದವನು. ಆದರೂ ತನ್ನ ಅಸಹಾಯಕತೆಯನ್ನು ಪ್ರದರ್ಶಿಸುವ ಈ ಸಂದರ್ಭದಲ್ಲಿ ತೀರಾ

ವಿಚಿತ್ರವೆನ್ನುವಂತೆ ದುರ್ಯೋಧನ ಕರ್ಣನ ಹೆಸರನ್ನು ಉಲ್ಲೇಖಿಸುತ್ತಾನೆ. ಇದಕ್ಕೆ ಪ್ರಬಲವಾದ ಕಾರಣವುಂಟು. ಪರಿಸ್ಥಿತಿಯ ಹಿನ್ನೆಲೆಯನ್ನು ತಿಳಿದಾಗ ಈ ಮಾತು ಸ್ಫುಟವಾಗುತ್ತದೆ.

ಯುದ್ಧ ಪ್ರಾರಂಭವಾಗುವ ಮುನ್ನ ಒಂದು ಘಟನೆ ನೆಡೆದಿತ್ತು. ಭೀಷ್ಮಾಚಾರ್ಯರಿಗೆ ಸೇನಾಪತಿ ಪದವನ್ನೊಪ್ಪಿಸಿದ ಸಂದರ್ಭದಲ್ಲಿ ಅವರು ತಮ್ಮ ವೀರರ ಹೆಸರನ್ನು ಉಲ್ಲೇಖಿಸುತ್ತಾ ಬದ್ಧಿಪೂರ್ವಕವಾಗಿ ಕರ್ಣನ ಹೆಸರನ್ನು ಬಿಟ್ಟುಬಿಡುತ್ತಾರೆ. ಕರ್ಣ ಇದನ್ನು ನೆನಪಿಸಿಕೊಟ್ಟಾಗ "ನಾನು ನಿನ್ನನ್ನು ಮಹಾವೀರನೆಂದು ಪರಿಗಣಿಸುವುದಿಲ್ಲಿ, ಅದಕ್ಕೆಂದೇ ನಿನ್ನ ಹೆಸರನ್ನು ಉಲೇಖಿಸಿಲ್ಲ" ಎಂದು ಬಿಡುತ್ತಾರೆ. ಇದರಿಂದ ಸಿಟ್ಟಿಗೆದ್ದ ಕರ್ಣ ಭೀಷ್ಮರು ಸೇನಾಪತಿಯಾಗಿರುವಷ್ಟು ಕಾಲ ತಾನು ಬಿಲ್ಲು ಹಿಡಿದು ಯುದ್ಧ ಮಾಡುವುದಿಲ್ಲ –ಎಂದು ಪ್ರತಿಜ್ಞೆ ಮಾಡಿದ. 'ಕರ್ಣಶ್ಚ' ಎಂದು ಹೇಳುವಾಗ ದುರ್ಯೋಧನನ ಮನಸ್ಸಿನಲ್ಲಿ ಕಾಡುತ್ತಿದ್ದ ಘಟನೆಯಿದು. ಯಾರು ತನ್ನ ಕಡೆಗೆ ಪ್ರಾಮಾಣಿಕವಾಗಿ ನಿಂತು ಹೋರಾಡಬಲ್ಲನೋ ಅಂಥವನು ಶಸ್ತ್ರಸನ್ಯಾಸ ಮಾಡಿದ್ದಾನೆ. ಇದ್ದೂ ಇಲ್ಲದಂತಾಗಿದ್ದಾನೆ. ಯಾರು ಹೋರಾಟಕ್ಕಾಗಿ ಮುಂಚೂಣಿಯಲ್ಲಿ ನಿಂತಿದ್ದಾರೋ ಅವರೆಲ್ಲಾ ಒಳಗಿಂದೊಳಗೆ ಪಾಂಡವ ಪಕ್ಷಪಾತಿಗಳು. ಒಂದು ಬಗೆಯ ಅಂತರಂಗ ಶತ್ರುಗಳು. ತನ್ನ ಒಳಬಗೆಯ ಈ ಧ್ವನಿಯನ್ನು ಸ್ಫುಟಪಡಿಸುವುದಕ್ಕಾಗಿಯೇ ದುರ್ಯೋಧನ 'ಭೀಷ್ಮಶ್ಚ ಕರ್ಣಶ್ಚ' ಎಂದು ಭೀಷ್ಮಕರ್ಣರನ್ನು ಜತೆಜತೆ ಉಲ್ಲೇಖಿಸುತ್ತಾನೆ.

ಆರನೆಯ ಹೆಸರು ವಿಕರ್ಣನದ್ದು. ಈ ವಿಕರ್ಣ ದುರ್ಯೋಧನನ ೯೯ ಮಂದಿ ತಮ್ಮಂದಿರಲ್ಲಿ ಒಬ್ಬ. ದುಃಶಾಸನನಂತಹ ಪ್ರಮುಖ ಹೆಸರನ್ನು ಉಲ್ಲೇಖಿಸದೇ ಇವನೊಬ್ಬನ ಹೆಸರನ್ನೇ ಈ ಸಂದರ್ಭದಲ್ಲಿ ದುರ್ಯೋಧನ ನೆನಪಿಸಿಕೊಳ್ಳುವುದಕ್ಕೆ ಒಂದು ವಿಶಿಷ್ಟವಾದ ಕಾರಣವುಂಟು. ದ್ರೌಪದಿಯ ವಸ್ತ್ರಾಪಹಾರದ ಸಮಯದಲ್ಲಿ ಎಲ್ಲ ತಮ್ಮಂದಿರೂ ತನ್ನ ನೆರವಿಗೆ ನಿಂತಾಗ ಇವನೊಬ್ಬನೇ ಸೊಬಗುತನದ ಸೋಗು ಹಾಕಿ ಅದನ್ನು ವಿರೋಧಿಸಿದವನು. "ಅತ್ತಿಗೆಯನ್ನು ಸಭೆಯಲ್ಲಿ ಅವಮಾನಗೊಳಿಸುವುದು ತಪ್ಪು" ಎಂದು ಘೋಷಿಸಿ ಮುದುಕರಿಂದ ಬೆನ್ನು ಚಪ್ಪರಿಕೊಂಡ ಸೋಗಲಾಡಿ. ಇಂಥವನನ್ನು ನಂಬುವುದು ಹೇಗೆ? ಈಗಲೂ ಸೋದರರಾದ ಪಾಂಡವರ ವಿರುದ್ಧ ಯುದ್ಧ ಹೂಡುವುದು ತಪ್ಪು ಎಂದು ಸೋಗುಹಾಕಿ ಕೈಕೊಟ್ಟರೂ ಕೊಟ್ಟನೇ.

ತಮ್ಮಂದಿರಲ್ಲಿ ಪ್ರಮೂಖರಾದ ಯಾರ ಹೆಸರನ್ನೂ ಹೇಳದೇ ವಿಕರ್ಣನೊಬ್ಬನನ್ನೇ ಈ ಸಂದರ್ಭದಲ್ಲಿ ಗುರುತಿಸುವ ದುರ್ಯೋಧನನ ಹೃದಯದ ಭಾವನೆ ಸುಸ್ಪಷ್ಟ.

ದುರ್ಯೋಧನ ಕೊನೆಯದಾಗಿ ಉಲ್ಲೇಖಿಸಿದ ಏಳನೇ ವ್ಯಕ್ತಿ ಸೌಮದತ್ತಿ– "ಸೌಮದತ್ತಿಸ್ತಥೈವ ಚ". ಸೌಮದತ್ತಿಯ ಕಥೆಯೂ ಅಷ್ಟೇ ಎನ್ನುತ್ತಾನೆ ಈ ಉದ್ಗಾರದ ಮೂಲಕ. ಶಂತನುವಿನ ಸೋದರ ಬಾಹ್ಲೀಕ. ಅವನ ಮಗ ಸೋಮದತ್ತ. ಸೋಮದತ್ತನಿಗೆ ಮೂವರು ಮಕ್ಕಳು– ಭೂರಿ, ಭೂರಿಶ್ರವಸ್ ಮತ್ತು ಶಲ. ಇವರಲ್ಲಿ ಮಧ್ಯಮನಾದ ಭೂರಿಶ್ರವಸ್ ಹೆಚ್ಚಿನ ವೀರನಾಗಿ ಸೌಮದತ್ತಿ ಎಂದು ಖ್ಯಾತನಾದವನು. ಭೀಷ್ಮಾಚಾರ್ಯರಿಗೆ ಪುತ್ರಸ್ಥಾನೀಯನು. ಮೂಲತಃ ಬಾಹ್ಲೀಕದೇಶದ ಈತನಿಗೆ ಕೌರವರ ಜೊತೆಗೆ ಯಾವ ಆತ್ಮೀಯ ಬಂಧವೂ ಇಲ್ಲ. ಕೇವಲ ಭೀಷ್ಮರ ಮೇಲಿನ ಪ್ರೀತಿಯಿಂದ ತನ್ನ ಕಡೆಗೆ ಬಂದವನು. ಅಷ್ಟೇ ಅಲ್ಲದೆ ಬಾಹ್ಲೀಕನ ಮಗಳು ರೋಹಿಣಿ ವಸುದೇವನ ಮಡದಿ. ಬಲರಾಮನ

ತಾಯಿ. ಈ ಸಂಬಂಧದಿಂದ ಈತನೂ ಈತನ ಕಡೆಯವರೆಲ್ಲರೂ ಅಂತತಃ ಕೃಷ್ಣ ಪಕ್ಷಪಾತಿಗಳು ಮತ್ತು ಪಾಂಡವ ಪಕ್ಷಪಾತಿಗಳು. ಅದಕ್ಕೆಂದೇ ದುರ್ಯೋಧನ ಸೌಮದತ್ತಿಯ ಕಥೆಯೂ ಅಷ್ಟೇ ಎಂದು ನಿರ್ವೇದದಿಂದ ಉಲ್ಲೇಖಿಸುತ್ತಾನೆ.

ಇಲ್ಲಿ ಕೃಪಾಚಾರ್ಯರಿಗೆ 'ಸಮಿತಿಂಜಯಃ' ಎಂಬ ವಿಶೇಷಣವನ್ನೂ ನೀಡಲಾಗಿದೆ. ಯುದ್ಧದಲ್ಲಿ ಗೆಲ್ಲಬಲ್ಲವನು ಎಂದು ಇದರ ಅರ್ಥ. ಇದು ಕೇವಲ ಕೃಪಾಚಾರ್ಯರಿಗೆ ಮಾತ್ರವೇ ವಿಶೇಷಣವಾಗಿ ಬಂದದ್ದಲ್ಲ. ಏಳೂ ಮಂದಿಗೆ ಒಟ್ಟಿಗೆ ಅನ್ವಯವಾಗುವಂತೆ ನಡುವಿನಲ್ಲಿ ಈ ವಿಶೇಷಣವನ್ನು ಸೇರಿಸಲಾಗಿದೆ. ಇದು ದುರ್ಯೋಧನನ ಇನ್ನೊಂದು ನಂಜುಮಾತು. ಇಂಥ ಮಂದಿಯಲ್ಲ ತನ್ನನ್ನು ಯುದ್ಧದಲ್ಲಿ ಗೆಲ್ಲಿಸಬೇಕಾಗಿದೆ. ಇವರನ್ನು ನಂಬಿ ತಾನು ಪಂಡವರ ವಿರುದ್ಧ ಯುದ್ಧ ಮಾಡಬೇಕಾಗಿದೆ. ಇದೊಂದು ನುಂಗಲಾರದ ತುತ್ತು ಎನ್ನುವುದು ದುರ್ಯೋಧನನ ಅಂತರಂಗ.

* * * * * *

# ಭಗವದ್ಗೀತೆ

–ಬನ್ನಂಜೆ ಗೋವಿಂದಾಚಾರ್ಯ

ದುರ್ಯೋಧನನ ಕಡೆಯಲ್ಲಿ ೧೧ ಅಕ್ಷೋಹಿಣಿ ಬೃಹತ್ ಸೇನೆಯಿದೆ. ೯೯ ಮಂದಿ ತಮ್ಮಂದಿರಿದ್ದಾರೆ. ಆದರೆ ತನ್ನ ಪರವಾಗಿ ಹೋರಾಡುವವರು ಯಾರು ಎಂದು ಲೆಕ್ಕ ತೆಗೆಯುವಾಗ ಅವನಿಗೆ ನೆನಪಾದದ್ದು ಏಳೇ ಮಂದಿ! ಪಾಪ, ದುರ್ಯೋಧನನ ಪರಿಸ್ಥಿತಿ ಎಂಥ ಶೋಚನೀಯ.

ಹಾಗಾದರೆ ಉಳಿದ ಅಷ್ಟೊಂದು ಮಂದಿಯ ಬಗೆಗೆ ಅವನ ಅನ್ನಿಸಿಕೆಯೇನು? ಮುಂದಿನ ಶ್ಲೋಕ ಅದನ್ನು ವಿವರಿಸುತ್ತದೆ–

**ಅನ್ಯೇ ಚ ಬಹವಃ ಶೂರಾ ಮದರ್ಥೇ ತ್ಯಕ್ತ ಜೀವಿತಾಃ ।**
**ನಾನಾ ಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ ॥೯॥**

[ಇತರರೂ ಬಹಳ ಮಂದಿ ಇದ್ದಾರೆ. ಎಲ್ಲರೂ ಶೂರರೆ. ನನಗಾಗಿ ಜೀವ ಕೊಡಲಿಕ್ಕೆ ಸಿದ್ಧರಾದವರು. ಬಗೆಬಗೆಯ ಆಯುಧಗಳನ್ನು ಹಿಡಿದುಹೋರಾಟಕ್ಕೆ ಅಣಿಯಾದವರು. ಎಲ್ಲರೂ ಯುದ್ಧವಿದ್ಯೆಯಲ್ಲಿ ಪಾರಂಗತರು.]

ಮೇಲುನೋಟಕ್ಕೆ ಈ ಮಾತು ತನ್ನ ಕಡೆಯ ವೀರರ ಬಗೆಗೆ ಮೆಚ್ಚಿಗೆಯ ಉದ್ಗಾರದಂತಿದೆ. ಆದರೆ ಈ ತನಕದ ಬೆಳವಣಿಗೆಯ ಹಿನ್ನಲೆಯಲ್ಲಿ, ಗ್ರಂಥದ ಒಟ್ಟಂದದಲ್ಲಿ ಈ ಮಾತು ಬೇರೊಂದು ಧ್ವನಿಯಲ್ಲೆ ಪರ್ಯವಸಾನಗೊಳ್ಳುತ್ತದೆ.

ಈ ಏಳು ಮಂದಿಯೇ ಎಂದಲ್ಲ, '**ಅನ್ಯೇ ಚ ಬಹವಃ**'– ಇನ್ನೋ ಇದ್ದಾರೆ ಬಹಳ ಮಂದಿ– ಲೆಕ್ಕಕ್ಕೆ. ಹಾಗಂತ ಅವರು ಅಸಮರ್ಥರು ಎಚಿದೇನೂ ಅಲ್ಲ: '**ಸರ್ವೇ ಯುದ್ಧವಿಶಾರದಾಃ**'– ಎಲ್ಲರೂ ಹೋರಾಟದ ಕಲೆಯಲ್ಲಿ ಪರಿಣತರಾದ ಕಲಿಗಳೇ. '**ನಾನಾ ಶಸ್ತ್ರಪ್ರಹರಣಾಃ**'– ಕೈಯಲ್ಲಿ ಅಯುಧ ಹಿಡಿದು ಹೋರಾಟಕ್ಕೆ ಹೊರಟಿದ್ದಾರೆ ಎನ್ನುವುದೂ ನಿಜ. ಆದರೆ ಏನು ಉಪಯೋಗ? ತನಗಿದ್ದ ಆಸಕ್ತಿ ಈ ಯುದ್ಧದಲ್ಲಿ ಅವರಿಗಿದೆಯೆ? ಇರುವುದು ಸಾಧ್ಯವೇ? ಯಾವುದೋ ದಾಕ್ಷಿಣ್ಯಕ್ಕೆ ಬಲಿ ಬಿದ್ದು ಬಂದಿದ್ದಾರೆ. ಯಾವುದೋ ಮುಲಾಜಿಗೆ ಹೋರಾಟದ ಕಣಕ್ಕಿಳಿದಿದ್ದಾರೆ. ಅವರು ಮನಃಪೂರ್ವಕವಾಗಿ ತನ್ನ ಪರ ಹೋರಾಡಬಲ್ಲರೆ?

ಯಾವುದೋ ದೇಶಗಳಿಂದ ಬಂದ ಸೇನಾಪಡೆಗಳು. ಬಹಳ ಜನಕ್ಕೆ ಯಾರು ಗೆಲ್ಲಬೇಕು–ಯಾರು ಸೋಲಬೇಕು ಎನ್ನುವ ಸಂಗತಿಯೇ ಗೊತ್ತಿಲ್ಲ. ಸೇನಾಪತಿ ಹೇಳಿದ ಕಡೆ ಕತ್ತಿ ಹಿಡಿದು ಸಾಗುವುದಷ್ಟೆ ಅವರ ಕಾಯಕ. ಯಾರು ಸೋತರೂ ಒಂದೆ, ಯಾರು ಗೆದ್ದರೂ ಒಂದೆ.

ಇನ್ನು ಕೆಲವರು ಒಳಗಿಂದೊಳಗೆ ಪಾಂಡವರ ಪಕ್ಷಪಾತಿಗಳೂ ಇರಬೇಕು– ಶಲ್ಯನಂತೆ.
ಇವರೆಲ್ಲ ನಿಜವಾಗಿ ಯುದ್ಧ ಮಾಡಬಲ್ಲರೆ? ಅಥವಾ ಯಾವುದೋ ಆವೇಶದಿಂದ ಯುದ್ಧ ಮಾಡಿದರೂ ಪಾಂಡವರ ಒಕ್ಕಟ್ಟಿನ ಸನ್ನಾಹದ ಮುಂದೆ ನಮ್ಮ ಈ ಗೋಜಲುಗೊಜಲಾದ, ಅರೆಮನಸ್ಸಿನಿಂದಲೆ ರಂಗಕ್ಕಿಳಿದ ವೀರರ ಪಡೆ ವಿಜಯವನ್ನು ಸಾಧಿಸಬಲ್ಲುದೆ? ದುರ್ಯೋಧನನ ಮನಸ್ಸು 'ಇಲ್ಲ' ಎಂಬ ಉತ್ತರದ ಕಡೆಗೇ ಒಲಿಯುತ್ತಿದೆ. ಅವನ ಅಂತರಾತ್ಮ ಪ್ರಾರಂಭದಲ್ಲೆ ಅಶುಭದ ಚಿಂತನೆಯಲ್ಲಿ ತೊಡಗಿಬಿಟ್ಟಿದೆ. ಅದಕೆಂದೆ ಅವನ ಉದ್ಗಾರ: '**ಮದರ್ಥೇ ತ್ಯಕ್ತಜೀವಿತಾಃ**'– ನನಗಾಗಿ ಜೀವದ ಆಸೆ ಬಿಟ್ಟು ಬಂದವರು.

ಜೀವದ ಪಣವಿಟ್ಟಾದರೂ ನನ್ನ ವಿಜಯಕ್ಕಾಗಿ ಹೋರಾಡುವವರು ಎನ್ನುವುದು ಮೇಲುನೋಟದ ಅರ್ಥವಾದರೂ ದುರ್ಯೋಧನನ ಮನಸ್ಸು ಅನಿಷ್ಟದ ಅರ್ಥವನ್ನೇ ಚಿಂತಿಸುತ್ತದೆ– ಇವರು ನನಗಾಗಿ ಸಾಯಬಂದವರು; ಹೊರತು ನನ್ನನ್ನು ಗೆಲ್ಲಿಸಬಂದವರಲ್ಲ.

ಪ್ರಾಯಃ ತನ್ನ ಎಲ್ಲ ಲೆಕ್ಕಾಚಾರಗಳೂ ತಲೆಕೆಳಗಾಗುತ್ತಿವೆ; ತನ್ನ ಎಲ್ಲ ಸನ್ನಾಹಗಳೂ ವ್ಯರ್ಥವಾಗುತ್ತಿವೆ. ಪಾಂಡವರ ವೀರರ ಮುಂದೆ ಜಗತ್ತಿನ ವೀರರೆಲ್ಲ ತನ್ನಿಂದಾಗಿ ಬಲಿಪಶುಗಳಾಗುತ್ತಾರೆ– ತನ್ನ ಕನಸು ಎಂದೂ ನನಸಾಗದೆ ಉಳಿಯುತ್ತದೆ ಎನ್ನುವ ಭಯ. ಪುಕ್ಕ ದುರ್ಯೋಧನನ ಒಳಬಗೆಯ ಒಳಹೊಕ್ಕು ಸುಪ್ತಪ್ರಜ್ಞೆಯ ಆಳದಲ್ಲಿ ಹೇಗೆ ಅವನನ್ನು ಕಾಡುತ್ತಿದೆ ಎನ್ನುವುದನ್ನು ಈ ಶ್ಲೋಕ ಅತ್ಯಂತ ಸುಂದರವಾಗಿ ಚಿತ್ರಿಸುತ್ತದೆ.

ಆದರೆ ಮುಂದಿಟ್ಟ ಅಡಿ ಹಿಂದಿಡುವಂತಿಲ್ಲ. ಕಣಕ್ಕೆ ಇಳಿದ ಮೇಲೆ ಇನ್ನು ಯೋಚಿಸಿ ಫಲವಿಲ್ಲ. ಏನಾದರೂ ಮಾಡಿ ಗೆಲ್ಲಲೇಬೇಕು. ಏನಿದ್ದರೂ ೧೧ ಅಕ್ಷೋಹಿಣಿ ತನ್ನ ಬಳಿಯಿಲ್ಲವೇ? ಹೀಗೆ ಏನೆಲ್ಲ ಆತ್ಮ ಸಮರ್ಥನೆ ಮಾಡಿಕೊಂಡರೂ ದುರ್ಯೋಧನನ ಸುಪ್ತಪ್ರಜ್ಞೆ ಈ ಹನ್ನೊಂದಕ್ಕಿಂತ ಆ ಏಳೇ ದೊಡ್ಡ ಸಂಖ್ಯೆ ಎಂದು ಒಳಗಿನಿಂದ ಮೊಳಗುತ್ತಿದೆ. ಅದನ್ನು ಅದುಮಿಡಲಾಗದೆ ಅವನು ದ್ರೋಣರ ಮುಂದೆ ತೋಡಿಕೊಳ್ಳುತ್ತಾನೆ–

**ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ ।**
**ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ॥೧೦॥**

[ಅದರಿಂದ ಭೀಷ್ಮರಿಂದ ರಕ್ಷಿತವಾದ ನಮ್ಮ ಸೇನೆ ಪಾಂಡವರನ್ನು ಎದುರಿಸಲು ಸಮರ್ಥವಾಗದು. ಈ ಪಾಂಡವರ ಸೇನೆಯಾದರೋ ಭೀಮನಿಂದ ರಕ್ಷಿತವಾಗಿ ನಮ್ಮನ್ನು ಗೆಲ್ಲಲು ಸಮರ್ಥವಾಗಿದೆ.]

ತನ್ನ ಒಳಬಗೆಯ ಅನ್ನಿಸಿಕೆಗೆ ದುರ್ಯೋಧನ ಇಲ್ಲಿ ಸ್ಪಷ್ಟವಾದ ರೂಪ ಕೊಟ್ಟ. ತಮ್ಮ ಸಂಖ್ಯಾಬಲ ಎಷ್ಟೇ ಇರಲಿ. ಈಗಣ ಪರಿಸ್ಥಿತಿ ನೋಡಿದರೆ– ಗೆಲುವು ತಮ್ಮದಲ್ಲ.
ಪಾಂಡವರದ್ದೇ ಎನ್ನುವುದು ನಿಶ್ಚಿತ. ಯುದ್ಧದ ಪ್ರಾರಂಭದ ಕ್ಷಣದಲ್ಲಿಯೆ ದುರ್ಯೋಧನನ ಅಂತರಾತ್ಮ ಅವನಿಗೆ ಕಣಿ ಹೇಳಿ ಬಿಡುತ್ತದೆ. ತಡೆದು ಕೊಳ್ಳಲಾರದೆ ಅವನು ಅದನ್ನು ದ್ರೋಣರ ಮುಂದೆ ತೋಡಿಕೊಂಡು ಬಿಡುತ್ತಾನೆ.

ಸಂಪ್ರದಾಯವಾದಿಗಳಾದ ಅನೇಕ ಮಂದಿ ಟೀಕಾಕಾರರಿಗೆ ಈ ಶ್ಲೋಕ ಒಂದು ಸವಾಲಾಗಿ ಪರಿಣಮಿಸಿದೆ. ಮನಃಶಾಸ್ತ್ರದ ಸೂಕ್ಷ್ಮ ಎಳೆಗಳನ್ನು ಈ ಪದ್ಯಗಳು ಸುಂದರವಾಗಿ ತೆರೆದು ತೋರಿದರೂ ಅವರು ಅದನ್ನು ಅರ್ಥ ಮಾಡಿಕೊಳ್ಳಲು ಸಂಪೂರ್ಣವಾಗಿ ಸೋತಿದ್ದಾರೆ.

ಅಚಾರ್ಯ ಶಂಕರರು, ಅಚಾರ್ಯ ಮಧ್ವರು ಈ ಶ್ಲೋಕಗಳ ಬಾವ ಸ್ಫುಟವಾಗಿದೆ ಎಂದು ವ್ಯಾಖ್ಯಾನ ಬರೆಯದೆ ಬಿಟ್ಟರು. ಆದರೆ ಮುಂದಿನ ವ್ಯಾಖ್ಯಾನಕಾರರು ಕೆಲವರು ಅಷ್ಟು ಎತ್ತರಕ್ಕೆ ಏರಲಾರದೆ ಹೋದರು. ಅವರು ಗೊಂದಲಕ್ಕೊಳಗಾಗಿ ತಪ್ಪು ನಿರ್ಧಾರಕ್ಕೆ ಬಂದರು. ಇಡಿಯ ಶ್ಲೋಕಕ್ಕೆ ತಪ್ಪು ಅರ್ಥ ಬರೆದರು. ಈ ಶ್ಲೋಕದ ಪದಗಳ ಅರ್ಥದ ಸಂದಿಗ್ಧತೆ–ನಿಗೂಡತೆಯೂ (ambiguity) ಅವರನ್ನು ಗೊಂದಲಗೆಡಿಸಿತು. ಹೀಗಾಗಿ ಗೀತೆಯ ಮೂಲ ಸ್ಫೂರ್ತಿಗೇ ವಿರುದ್ಧವಾದ ಅರ್ಥವನ್ನು ಅವರು ಬರೆದರು.

ಗೊಂದಲಕ್ಕೊಳಗಾದ ವ್ಯಾಖ್ಯಾನಕಾರರ ವಿವರಣೆಯೇನು? ಅವರ ಅಂಥ ಗೊಂದಲಕ್ಕೆ ಕಾರಣವೇನು ಎನ್ನುವುದನ್ನು ನಾವು ಈಗ ನೋಡೋಣ–

ಪರ್ಯಾಪ್ತ–ಅಪರ್ಯಾಪ್ತ ಎನ್ನುವ ಪದಗಳ ದ್ವಂದ್ವಾರ್ಥವೆ ಅವರ ತಪ್ಪು ನಿರ್ಧಾರಕ್ಕೆ ಮೂಲ ಕಾರಣ. ಪರ್ಯಾಪ್ತ = ಸೀಮಿತ. ಅಪರ್ಯಾಪ್ತ = ಅಸೀಮ, abundant ಎಂಬ ಅರ್ಥವೂ ಬಳಕೆಯಲ್ಲಿದೆ. ಪರ್ಯಾಪ್ತ = ಸಮರ್ಥ, competent. ಅಪರ್ಯಾಪ್ತ = ಸಾಕಷ್ಟು ಸಮರ್ಥವಲ್ಲದ್ದು ಎನ್ನುವ ಇನ್ನೊಂದು ಅರ್ಥವೂ ಈ ಪದಗಳಿಗಿದೆ.

ಈ ದ್ವಂದ್ವವೆ ವ್ಯಾಖ್ಯಾನಕಾರರನ್ನು ದ್ವಂದ್ವದಲ್ಲಿ ಸಿಲುಕಿಸಿದ್ದು. ಪರ್ಯಾಪ್ತ ಎಂದರೆ ಸೀಮಿತ. ಅಸಮರ್ಥ ಎಂದೂ ಆಗಬಹುದು; ಸಮರ್ಥ ಎಂದೂ ಆಗಬಹುದು. ದಾರಿತಪ್ಪಿದ ವ್ಯಾಖ್ಯಾನಕಾರರು ಮೊದಲನೆಯ ಅರ್ಥವನ್ನು ಆಯ್ದುಕೊಂಡರು. ಅತಿಶಯವಾದ ಆತ್ಮವಿಶ್ವಾಸದಿಂದ ಯುದ್ಧಕ್ಕಿಳಿದ ದುರ್ಯೋಧನನ ಬಾಯಲ್ಲಿ ಈಗ ಸೋಲಿನ, ನಿರಾಶೆಯ ಯುದ್ಗಾರ ಬರುವುದು ಶಕ್ಯವಿಲ್ಲ ಎಂದು ಭಾವಿಸಿ ಅವರು ಇಂಥ ಪ್ರಮಾದ ಮಾಡಿದರು.

ಅವರ ಪ್ರಕಾರ ಶ್ಲೋಕದ ಅರ್ಥ ಹೀಗಿದೆ– "ಭೀಷ್ಮರ ಸೇನಾಪತ್ಯದಲ್ಲಿ ತಮ್ಮ ಬೃಹತ್ ಸೇನೆ ಪಾಂಡವರನ್ನು ಸೋಲಿಸಲು ಸಾಕಷ್ಟು ಸಮರ್ಥವಾಗಿದೆ. ಆದರೆ ಭೀಮನಿಂದ ರಕ್ಷಿತವಾದ ಈ ಪಾಂಡವರ ಸೇನೆ ನಮಗೆ ಎಣೆಯಲ್ಲ; ನಮ್ಮನ್ನು ಎದುರಿಸುವಷ್ಟು ಸಮರ್ಥವಲ್ಲ". ಈ ಅರ್ಥ ಇಲ್ಲಿ ಹೊಂದಿಕೆಯಾಗುವುದೇ ಎನ್ನುವುದನ್ನು ನೋಡೋಣ.

ದ್ರೋಣರ ಬಳಿ ದುರ್ಯೋಧನ ಮಾತನಾಡಿದ ಧಾಟಿಯನು ನಾವು ನೋಡಿದ್ದೇವೆ. ಅವನು ಪಾಂಡವರ ಕಡೆ ೧೧ ಮಂದಿ, ಮತ್ತು ಸಮಷ್ಟಿಯಾಗಿ ೧೮ ಮಂದಿ ವೀರರನ್ನು ಉಲ್ಲೇಖಿಸಿದರೆ ತನ್ನ ಕಡೆ ಬರಿಯ ೭ ಮಂದಿಯನ್ನು ಉಲ್ಲೇಖಿಸುತ್ತಾನೆ. ಆ ಏಳು ಮಂದಿಯಲ್ಲೂ ಅವನಿಗೆ ಪೂರ್ತಿ ಭರವಸೆ ಇಲ್ಲ ಎನ್ನುವುದು ಅವನ ಮಾತಿನ ಧಾಟಿಯಲ್ಲೆ ಸ್ಫುಟವಾಗುತ್ತದೆ. ಅವನು ವಿಜಯದ ಸಂದೇಹದಿಂದಲೇ ಭಯಗ್ರಸ್ತನಾಗಿಯೆ ಗುರುಗಳ ಬಳಿ ಬಂದವನು. ಭೀಷ್ಮರ ಬಗ್ಗೆ ಸ್ವಲ್ಪ ನಿಗಾ ಇರಲಿ– ಎಂದು ದ್ರೋಣರನ್ನು ಎಚ್ಚರಿಸುವುದು ಅವನ ಉದ್ದೇಶವಾಗಿತ್ತು. ಇಷ್ಟೆಲ್ಲ ಬೆಳವಣಿಗೆಯ ಅನಂತರ ಇದ್ದಕ್ಕಿದ್ದಂತೆ ಅವನು ಪಾಂಡವರ ಸೇನೆ ತಮಗೆ ಗಣ್ಯವೇ ಅಲ್ಲ– ತಾವೇ ಗೆಲ್ಲುವವರು ಎಂದು ಹೇಳುವುದು ಈ ಪ್ರಕರಣಕ್ಕೆ ಹೊಂದುವ ಮಾತಲ್ಲ.

ಮುಂದೆಯೂ ಪಾಂಡವರ ಶಂಖನಾದ ಕೇಳಿ ಕೌರವರ ಎದೆ ನಡುಗಿತು ಎನ್ನುವ ಮಾತು ಬರುತ್ತದೆ. ಅದಕ್ಕನುಗುಣವಾಗಿ ದುರ್ಯೋಧನನ ಸಂಶಯ ಪಿಶಾಚಿಯೆ ಈ ಶ್ಲೋಕದಲ್ಲಿ ಬಹಿಂಗಗೊಂಡಿದೆ ಎನ್ನುವುದೇ ಸರಿಯಾದ ವಿವರಣೆ.

ಹಿಂದೆ ಪಂಡವರ ಸೇನೆಯನ್ನು **'ಮಹತೀಂ ಚಮೂಂ'–** ಬಹು ದೊಡ ಸೇನೆ ಎಂದು ದುರ್ಯೋಧನನೇ ಹೇಳಿದ್ದಾನೆ. ಸೇನೆ–ಸೇನಾಪತಿಗಳ ವಿವರ ನೀಡಿದ್ದಾನೆ. ಪಾಂಡವರ ಮಕ್ಕಳನ್ನು ಪ್ರತ್ಯೇಕವಾಗಿ ಉಲ್ಲೇಖಿಸಿದ್ದಾನೆ. ಪ್ರತಿಯಾಗಿ ತನ್ನ ಪಕ್ಷದ ಸೇನೆಯ ಬಗ್ಗೆ ಹೆಗ್ಗಳಿಕೆಯ ಮಾತಿಲ್ಲ; ಸೇನಾಪತಿಯ ಉಲ್ಲೇಖವಿಲ್ಲ; ತನ್ನ ತಮ್ಮಂದಿರ, ಮಕ್ಕಳ ಉಲ್ಲೇಖ ಕೂಡ ಇಲ್ಲ. ಇರುವ ೧೧ ಅಕ್ಷೋಹಿಣಿ ನನಗಾಗಿ ಜೀವ ತೊರೆಯಲು ಬಂದದ್ದು (**ತ್ಯಕ್ತ ಜೀವಿತ**) ಎನ್ನುವ ಮಾತಿನ ಭಂಗಿ ಬೇರೆ.

ಮುಂದೆ ಅವನನ್ನು ಖುಷಿಪಡಿಸಲೆಂದೆ ಶಂಖನಾದ–ಸಿಂಹನಾದ ಮಾಡಿದರು ಎಂಬ ಮಾತು ಬರುತ್ತದೆ. ಹಾಗಾದರೆ ಅವನು ಮೊದಲು ನಾಖುಷಿಯಲ್ಲಿ, ಬೇಸರದಿಂದಲೇ ಬಂದಿದ್ದ ಎನ್ನುವ ಮಾತು ಸ್ಪಷ್ಟ ತಾನೆ?

ಅವನ ಬೇಸರಕ್ಕೆ ಕಾರಣ ಜಯದ ಬಗ್ಗೆ ಅವನ ಭರವಸೆ ಕುಸಿದದ್ದೆ ಎನ್ನುವುದು ಸ್ಪಷ್ಟ. ಇಷ್ಟೆಲ್ಲ ಪೂರ್ವೋತ್ತರಗಳಿಗೆ ವಿರುದ್ಧವಾಗಿ ಇಲ್ಲಿ ಮಾತ್ರ ಅವನು ಜಯದ ಬರವಸೆಯ ಘೋಷಣೆ ಮಾಡುವುದು ಹೇಗೆ ಸಾಧ್ಯ? ವ್ಯಾಖ್ಯಾನಕಾರರ ಬುದ್ಧಿ ಏಕೆ ಇಷ್ಟು ಮಂಕಾಯಿತು!

ಈ ಶ್ಲೋಕವನ್ನೆ ಸರಿಯಾಗಿ ಗಮನಿಸದೆ ಅವರ ಅರ್ಥ ಎಷ್ಟು ಜೊಳ್ಳು ಎನ್ನುವುದು ಸ್ಫುಟ ವಾಗುತ್ತದೆ.

ಇಲ್ಲಿ ತನ್ನ ಸೇನೆ ಭೀಷ್ಮಾಭಿರಕ್ಷಿತ ಎಂದರೆ ಪಾಂಡವರ ಸೇನೆ ಭೀಮಾಭಿರಕ್ಷಿತ ಎಂದಿದ್ದಾನೆ. ಇದೇನು ಪ್ರಾಸಕ್ಕಾಗಿ ಬಂದದ್ದಲ್ಲ. ಹಾಗಾದರೆ ಈಮಾತಿನ ಉದ್ದೇಶವೇನು.

ಭೀಷ್ಮರು ಕೌರವರ ಸೇನೆಯ ನಾಯಕ, ಅದರಿಂದ ಅದು ಭೀಷ್ಮಾಭಿರಕ್ಷಿತ ಎನ್ನುವುದು ಸರಿ. ಅದಕ್ಕೆ ಪ್ರತಿಯಾಗಿ ಇಲ್ಲಿಯೂ ಸೇನಾಪತಿಯಾದ ಧೃಷ್ಟದ್ಯುಮ್ನನನ್ನು ಉಲ್ಲೇಖಿಸಿ **"ಪರ್ಯಾಪ್ತಂ ತ್ವಿದಮೇತೇಷಾಂ ಧೃಷ್ಟದ್ಯುಮ್ನಾಭಿರಕ್ಷಿತಂ"** ಎನ್ನಬೇಕಿತ್ತಲ್ಲ. ಅದರ ಬದಲು ದುರ್ಯೋಧನ **'ಭೀಮಾಭಿರಕ್ಷಿತಂ'** ಎಂದು ಏಕೆ ಹೇಳಿದ? ಈ ಮಾತಿನ ಧ್ವನಿಯನ್ನು ಸರಿಯಾಗಿ ಗ್ರಹಿಸದೆ ಪ್ರಾಚೀನ ಟೀಕಾಕಾರರು ಕೆಲವರು ಬಹು ದೊಡ್ಡ ಪ್ರಮಾದ ಮಾಡಿದರು! ಆನಂದಗಿರಿ, ಮಧುಸೂದನ ಸರಸ್ವತಿ, ನೀಲಕಂಠರಂಥ ಟೀಕಾಕಾರ ದಿಗ್ಗಜಗಳೂ ಇಲ್ಲಿ ಮುಗ್ಗರಿಸಿದ್ದು ಅಚ್ಚರಿ ತರುವಂಥ ಸಂಗತಿ.

ಶ್ರೀಧರಸ್ವಾಮಿಗಳು, ವೇದಾಂತದೇಶಿಕರು ಮತ್ತು ರಾಘವೇಂದ್ರಸ್ವಾಮಿಗಳಂಥ ಬೆರಳೆಣಿಕೆಯ ಟೀಕಾಕಾರರು ಮಾತ್ರವೇ ಗೀತೆಯ ಹೃದಯವನ್ನು ಸ್ಪರ್ಶಿಸಿ ವಿವರಣೆ ನೀಡಿದ್ದಾರೆ. ಭೀಷ್ಮನಿಗೆ ಪ್ರತಿಯಾಗಿ ಭೀಮನನ್ನು ಉಕ್ಕೇಖಿಸಿದ ಮರ್ಮವನ್ನು ಅವರು ಸರಿಯಾಗಿಯೇ ಗುರುತಿಸಿದ್ದಾರೆ,

ದುರ್ಯೋಧನನಿಗೆ ಪಾಂಡವರಲ್ಲಿ ಹೆಚ್ಚು ದ್ವೇಷ ಇದ್ದದ್ದು, ಸ್ಪರ್ಧೆ ಇದ್ದದ್ದು ಭೀಮನ ಬಗೆಗೆಯೆ. ಬಾಲ್ಯದಿಂದಲೂ ವಿಷಪಾನಾದಿಗಳಿಂದ ಅವನು ಭೀಮನನ್ನು ಮುಗಿಸ ಬಯಸಿದ್ದ, ಕೊನೆಗೆ ಅಂತ್ಯಕಾಲದಲ್ಲು ಅವನು ಗದಾಯುದ್ಧ ಬಯಸಿದ್ದು ಭೀಮನ ಜತೆಗೆಯೆ, ಭೀಮನಿಂದ ಮಾತ್ರವೇ ತನ್ನ ಬವಿಷ್ಯತ್ತಿಗೆ ಅಪಾಯ ಎಂದು ಅವನು ಭಾವಿಸಿದ್ದ. ಅದಕ್ಕೆ ಸರಿಯಾಗಿ ಕಾಡಿಗೆ ಹೊರಡುವ ಮುನ್ನ ಭೀಮ ಕೌರವಸಂಹಾರದ ಪ್ರತಿಜ್ಞೆ ಮಾಡಿದ್ದ. ದುರ್ಯೋಧನನ ತೊಡೆ ಮುರುಯುವುದಾಗಿ, ದುಃಶಾಸನನ ನೆತ್ತರು ಕುಡಿವುದಾಗಿ ಪ್ರತಿಜ್ಞೆ ಮಾಡಿದ್ದ. ಮೈತ್ರೇಯ ಋಷಿಯಿಂದ ಅಂಥ ಒಂದು ಶಾಪವೂ ದುರ್ಯೋಧನನಿಗಿದೆ. ಅವನ ಭಯವೆಲ್ಲ ಭೀಮನಲ್ಲಿ ಕೇಂದ್ರಿತವಾಗಿದೆ. ಪ್ರಪಂಚದ ಗದಾಯುದ್ಧ ಪಟುಗಳಲೇ ಅದ್ವಿತೀಯನಾದ ಕೀಚಕನನ್ನೂ ಕೊಂದಮೇಲಂತು ಅವನ ಭಯ ಮಡುಗಟ್ಟಿದೆ.

ಯುದ್ಧ ಮಾಡದ ಕೃಷ್ಣನಿಗೆ ಅವನು ಹೆದರಲಿಲ್ಲ. ಗದಾಯುದ್ಧದಲ್ಲಿ ಅರ್ಜುನನ್ನು ತಾನು ಸೋಲಿಸಿಬಿಡಬಲ್ಲೆ ಎನ್ನುವ ಭಾವನೆ ಅವನದಾಗಿತ್ತು. ಹಾಗಾಗಿ ಪಾಂಡವಸೇನೆಯಲ್ಲಿ ಅವನ ಕಣ್ಣು ಕುಕ್ಕುವ ವ್ಯಕ್ತಿ ಭೀಮನೊಬ್ಬನೆ. ವ್ಯವಹಾರದಲ್ಲಿ ಧೃಷ್ಟದ್ಯುಮ್ನ ನಾಯಕನಾದರೂ ದುರ್ಯೋಧನನ ದೃಷ್ಟಿಯಲ್ಲಿ ಭೀಮನೇ ಆ ಸೇನೆಯ ನೇತಾರ.

ಹೀಗೆ ಒಂದೆಡೆ ಛಲದಂಕಮಲ್ಲನಾದ, ತನ್ನ ಹಠವನ್ನು ಬಿಡದೆ ತೀರಿಸುವ ತಾಕತ್ತುಳ್ಳ ಕಡುವೈರಿಯಾದ ಭೀಮ; ಜಗತ್ತಿನಲ್ಲಿಯ ಅಸಮ ಸಾಹಸಿಯೂ ಗದಾಯುದ್ಧ ನಿಪುಣನೂ ಆದ ಮಹಾವೀರ, ಇನ್ನೊಂದೆಡೆ ಒಳಗಿಂದೊಳಗೆ ಪಾಂಡವರನ್ನು ಪ್ರೀತಿಸುವ, ಅಂತರಂಗದಲ್ಲಿ ಅವರ ಜಯವನ್ನೇ ಹಾರಯಿಸುವ, ಮುಪ್ಪಿನಂಗಳದಲ್ಲಿ ಇರುವ ಭೀಷ್ಮ.

ಈ ಇಬ್ಬಗೆಯ ದ್ವಂದ್ವದಲ್ಲಿ ಸಿಕ್ಕಿದ ಭೀಷ್ಮರ ನೇತೃತ್ವದ ತನ್ನ ಸೇನೆ ಗೆಲ್ಲುವುದುಂಟೇ? ಮಹಾವೀರನಾದ, ಛಲಬಿಡದ ಸಾಹಸಿಯಾದ ಭೀಮನ ಬೆಂಬಲವುಳ್ಳ ಪಾಂಡವರ ಸೇನೆ ಸೋಲುವುದು ಸಾಧ್ಯವೆ? ಇದು ದುರ್ಯೋಧನನ ಮನದ ಆಶಯ.

ಇಲ್ಲಿ ಇನ್ನೂ ಒಂದು ಚಮತ್ಕಾರವಿದೆ. ತನ್ನ ಸೇನೆಯನ್ನು ತದ್ ಬಲಂ=ಆ ಸೇನೆಯೆಂದು ಪರೋಕ್ಷವಾಗಿ ಉಲ್ಲೇಖಿಸುತ್ತಾನೆ. (ತತ್=ಪಾಂಡವರಂತೆ ತಮ್ಮಲ್ಲಿ ಒಗ್ಗಟ್ಟಿನ ಸಜ್ಜು ಸಂಘಟನೆ ಇಲ್ಲದೆ ಇರುವುದರಿಂದ ಎನ್ನುವ ಅರ್ಥಾಂತರವಂತೂ ಇದ್ದೇ ಇದೆ). ಪಾಂಡವರ ಸೇನೆಯನ್ನು ಇದಂ ಬಲಂ=ಈ ಸೇನೆ ಎಂದು ತೀರ ಸಮೀಪದಲ್ಲಿ ಇರುವಂತೆ ಉಲ್ಲೇಖಿಸುತ್ತಾನೆ. ತನ್ನ ಸೇನೆ ಬಳಿಯಲ್ಲಿದೆ. ಅದನ್ನು 'ಈ ಸೇನೆ' ಎನ್ನಬೇಕು. ಪಾಂಡವರ ಸೇನೆ ದೂರದಲ್ಲಿದೆ, ಅದನ್ನು 'ಆ ಸೇನೆ' ಎನ್ನಬೇಕು. ಆದರೆ ಶ್ಲೋಕದಲ್ಲಿ 'ಈ ಸೇನೆ' ಆ ಸೆನೆಯಾಗಿದೆ 'ಆ ಸೇನೆ' ಈ ಸೇನೆಯಾಗಿದೆ. ಈ ಬದಲಾವಣೆಯಿಂದ ಒಂದು ಹೊಸ ಅರ್ಥಧ್ವನಿ ಹೊರುಡುತ್ತದೆ.

ತನ್ನ ಬಳಿಯೇ ಇದ್ದ ತನ್ನ ಸೇನೆ ಎಂದೋ ಕೈ ಮೀರಿ ತನ್ನ ಕೈ ತಪ್ಪಿಹೋದಂತೆ ದುರ್ಯೋಧನನಿಗೆ ಅನ್ನಿಸತೊಡಗಿದೆ. ಅದಕ್ಕೆಂದೆ ಅದನ್ನು 'ಆ ಸೇನೆ' ಎನ್ನುತ್ತಾನೆ. ಪಾಂಡವರ ಸೇನೆ, ದೂರದಲ್ಲಿ ಅವರ ಶಿಬಿರದ ಬಳಿಯಿದ್ದರೂ– ಈಗಾಗಲೇ ಅವನ ಮೇಲೆ ಎರಗಿ ಸುತ್ತುವರಿದಂತೆ ಅವನಿಗೆ ಅನ್ನಿಸತೊಡಗಿದೆ. ಅದಕ್ಕೆಂದೆ ಅದನ್ನು 'ಈ ಸೇನೆ' ಎನ್ನುತ್ತಾನೆ. ಹೀಗೆ ದುರ್ಯೋಧನ ಸಂಪೂರ್ಣ ಮನೋರೋಗಿಯಾಗಿ ಪರಿವರ್ತನೆ ಗೊಂಡಿದ್ದಾನೆ. ಮುಂದಿನ ಅವನ ಉದ್ಗಾರವೂ ಅದಕ್ಕೆ ಅನುಗುಣವಾಗಿಯೇ ಇದೆ.

**ಲೇಖಾಂಕ–೧೬**

# ಭಗವದ್ಗೀತೆ

–ಬನ್ನಂಜೆ ಗೋವಿಂದಾಚಾರ್ಯ

ದ್ರೋಣರ ಬಳಿ ತನ್ನ ಅಳಲನ್ನು ದೀರ್ಘವಾಗಿ ತೋಡಿಕೊಂಡ ದುರ್ಯೋಧನ ಎಚ್ಚರಿಕೆಯ ನುಡಿಯೊಡನೆ ಮಾತನ್ನು ಹೀಗೆ ಮುಗಿಸುತ್ತಾನೆ :

**ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ।**
**ಭೀಷ್ಮಮೇವಾಭಿರಕ್ಷಂತು ಭವಂತಃ ಸರ್ವ ಏವ ಹಿ॥೧೧॥**

[ಶತ್ರುಗಳು ನಮ್ಮ ಸೇನಾವ್ಯೂಹವನ್ನು ಮುರಿದು ಒಳನುಗ್ಗಬಹುದಾದ ಜಾಗಗಳಲ್ಲಿ ಎಲ್ಲೆಡೆಯು ನೀವೆಲ್ಲರೂ ಹಂಚಿಕೊಂಡು ನಿಂತು ಭೀಷ್ಮರನ್ನೆ ಕಾಪಾಡಬೇಕಾಗಿದೆ].

ಅಯನ ಎಂದರೆ ಶತ್ರುಗಳು ಹೊಂಚು ಹಾಕಿ ತಮ್ಮ ಸೇನೆಯ ಒಳಕ್ಕೆ ನುಗ್ಗಬಹುದಾದ ಒಳದಾರಿಗಳು. ಆಯಕಟ್ಟಿನ ಪ್ರದೇಶಗಳು ಮತ್ತು ಸೇನೆಯ ಪ್ರಮುಖ ನೆಲೆಗಳು ಕೂಡ.

ಆಯಕಟ್ಟಿನ ಸ್ಥಳಗಳಲ್ಲಿ ಯಾರನ್ನು ನಿಲ್ಲಿಸಬೇಕು; ಪ್ರಮುಖ ಸೇನಾನೆಲೆಗಳನ್ನು ಯಾರು ಕಾಯಬೇಕು ಎನ್ನುವ ನಿರ್ಧಾರ ಸೇನಾಪತಿಗಳಾದ ಭೀಷ್ಮರಿಗೆ ಸಂಬಂಧಪಟ್ಟದ್ದು. ಆದರೆ ದುರ್ಯೋಧನನಿಗೆ ಅವರ ಮೇಲಿದ್ದ ಭರವಸೆ ಕುಸಿಯತೊಡಗಿದೆ. ಅವರು ಸೇನಾಪತಿಗಳಾದದ್ದೆ ತನ್ನ ಕಡೆಯ ದುರಂತ ಎನ್ನುವಂತೆ ಅವನು ಈ ಮೊದಲು ಮಾತನಾಡಿದ್ದಾನೆ. ಅದಕ್ಕೆ ಅನುಗುಣವಾಗಿಯೆ ಇದೆ ಈ ಉಪಸಂಹಾರ.

ಭೀಷ್ಮರ ವಿರುದ್ಧ ದ್ರೋಣರನ್ನು ಎತ್ತಿಕಟ್ಟುವ ಕೆಲಸವನ್ನು ದುರ್ಯೋಧನ ಮಾಡುತ್ತಿದ್ದಾನೆ. ಇದರಿಂದ ಇವನು ಇನ್ನಷ್ಟು ದುರಂತವನ್ನು ಆಹ್ವಾನಿಸುತ್ತಿದ್ದಾನೆ ಎನ್ನುವ ಎಚ್ಚರ ಅವನಿಗಲ್ಲ.

ಆಯಕಟ್ಟಿನ ಸ್ಥಳಗಳನ್ನು ನೀವೆಲ್ಲ ನೋಡಿಕೊಳ್ಳಿ. ಶತ್ರುಗಳು ಒಳನುಗ್ಗದಂತೆ ಏನಲ್ಲ ಮಾಡಬೇಕೋ ಅದನ್ನಲ್ಲ ನೀವೇ ಮಾಡಿಬಿಡಿ. ಭೀಷ್ಮರ ಆಜ್ಞೆಗಾಗಿ ಕಾಯಬೇಡಿ. ಜತೆಗೆ ಪಾಂಡವರ ಪಕ್ಷಪಾತಿಗಳಾದ, ಮುದುಕರಾದ ಭೀಷ್ಮರನ್ನು ಕಣ್ಣಿಟ್ಟು ಕಾಪಾಡುವ ಹೊಣೆಯನ್ನೂ ನಿಮಗೆ ಒಪ್ಪಿಸುತ್ತಿದ್ದೇನೆ–ಎನ್ನುತ್ತಿದ್ದಾನೆ ದುರ್ಯೋಧನ.

ಪಕ್ಕದಲೇ ಇದ್ದ ಭೀಷ್ಮರು ಇದನ್ನು ಕೇಳಿಸಿಕೊಳ್ಳುವಂತೆ ಅವರ ವಿರುದ್ಧವಾಗಿ ದ್ರೋಣರ ಮುಂದೆ ಇಂಥ ಮಾತನ್ನಾಡುವ ದುರ್ಯೋಧನನ ಕುಹಕ ಇಲ್ಲಿ ಪರಾಕಾಷ್ಠೆಯನ್ನು ತಲುಪಿದೆ.

ಇಲ್ಲಿಗೆ ಗೀತೆಯ ಹನೊಂದು ಶ್ಲೋಕಗಳು ಮುಗಿದವು. ಹನ್ನೊಂದು ಅಕ್ಷೋಹಿಣೀ ಸೇನೆಯನ್ನು ಕೂಡಿಹಾಕಿ ಯುದ್ಧಕ್ಕೆ ನಿಂತ ದುರ್ಯೋಧನನ ಮತ್ತು ಅವನಪ್ಪ ಧೃತಾರಾಷ್ಟ್ರನ ಮನಃಸ್ಥಿತಿಯನ್ನು ಚಿತ್ರಿಸುವ ಭಾಗ ಇಲ್ಲಿಗೆ ಮುಗಿಯಿತು. ಮುಂದಿನ ಎಂಟು ಶ್ಲೋಕಗಳಲ್ಲಿ ಎರುಡೂ ಕಡೆಯ ಸೇನೆಯ ಮನಃಸ್ಥಿತಿಯನ್ನು ಚಿತ್ರಿಸಲಾಗಿದೆ. ಅದರ ಮುಂದೆ ಅಧ್ಯಾಯದ ಕೊನೆಯ ತನಕ ಅರ್ಜುನನ ಮನೋವಿಜ್ಞಾನದ ವಿಶ್ಲೇಷಣೆ. ಅನಂತರದ ೧೭ ಅಧ್ಯಾಯಗಳಲ್ಲಿ ಶ್ರೀಕೃಷ್ಣನಿಂದ ಸೈಕೋತೆರಪಿ . ಹೀಗಿದೆ ಗೀತೆಯ ಬೆಳವಣಿಗೆ.

ಮೊದಲ ಈ ಹನ್ನೊಂದು ಶ್ಲೋಕಗಳಿಗೆ ಆಚಾರ್ಯ ಶಂಕರರಾಗಲಿ, ಆಚಾರ್ಯ ಮಧ್ವರಾಗಲಿ ಅರ್ಥ ಬರೆದಿಲ್ಲ. ಹಿನ್ನಲೆ ತಿಳಿದವರಿಗೆ ಈ ಭಾಗ ಸ್ಪಷ್ಟವಾಗಿದೆ ಎಂದು ಅವರು ಭಾಷ್ಯ ಬರೆಯದೆ ಬಿಟ್ಟರು.

ಅವತರಣಿಕೆಯಲ್ಲಿ ಈ ಅಧ್ಯಾಯದ ಸಮಗ್ರ ಭಾವವನ್ನು ಕ್ರೋಢೀಕರಿಸಿದ ಅವರು ಕೃಷ್ಣನ ಉಪದೇಶ ಭಾಗಕ್ಕೆ ಮಾತ್ರವೆ ಭಾಷ್ಯ ಬರೆದರು.

ಆದರೆ ಆಚಾರ್ಯ ರಾಮಾನುಜರು ಈ ೧೧ ಶ್ಲೋಕಗಳ ಒಟ್ಟಂದದ ಅಭಿಪ್ರಾಯವನ್ನು ಹೀಗೆ ಸುಂದರವಾಗಿ ಸಂಗ್ರಹಿಸಿದ್ದಾರೆ:

**"ದುರ್ಯೋಧನಃ ಸ್ವಯಮೇವ ಭೀಮಾಭಿರಕ್ಷಿತಂ ಪಾಂಡವಾನಾಂ ಬಲಂ, ಆತ್ಮೀಯಂ ಚ ಭೀಷ್ಮಾಭಿರಕ್ಷಿತಂ ಬಲಮವಲೋಕ್ಯ, ಆತ್ಮವಿಜಯೇ ತಸ್ಯ ಬಲಸ್ಯ ಪರ್ಯಾಪ್ತತಾಂ, ಆತ್ಮೀಯಸ್ಯ ಬಲಸ್ಯ ತದ್ವಿಜಯೇ ಚಾಪರ್ಯಾಪ್ತತಾಮಾಚಾರ್ಯಾಯ ನಿವೇದ್ಯ ಅಂತರ್ವಿಷಣ್ಣೋಭವತ್ ।"**

ಇದರ ಭಾವ ಹೀಗಿದೆ : ಭೀಮಸೇನ ಸ್ವತಃ ತಾನೆ ನಿಂತು ರಕ್ಷಿಸುತ್ತಿರುವ ಪಾಂಡವರ ಸೇನೆಯನ್ನೂ, ಭೀಷ್ಮರಿಂದ ರಕ್ಷಿತವಾದ ತನ್ನ ಸೇನೆಯನ್ನೂ ಪರಿಶೀಲಿಸಿದ ದುರ್ಯೋಧನ–ಪಾಂಡವರ ಸೇನೆ ತಮ್ಮನ್ನು ಗೆಲ್ಲಲು ಸಮರ್ಥವಾಗಿರುವುದನ್ನೂ ತಮ್ಮ ಸೇನೆ ಪಾಂಡವರನ್ನು ಸೋಲಿಸಲು ಸಾಕಷ್ಟು ಸಜ್ಜಾಗಿಲ್ಲದಿರುವುದನ್ನೂ ಆಚಾರ್ಯ ದ್ರೋಣರ ಮುಂದೆ ವಿಜ್ಞಾಪಿಸಿಕೊಂಡು ಒಳಗಿಂದೊಳಗೆ ವಿಷಣ್ಣನಾದನು.

ಲೇಖಾಂಕ–೧೭

# ಭಗವದ್‌ಗೀತೆ

–ಬನ್ನಂಜೆ ಗೋವಿಂದಾಚಾರ್ಯ

ದ್ರೋಣರ ಮುಂದೆ ತನ್ನ ಅಳಲನ್ನು ತೊಡಿಕೊಂಡ ದುರ್ಯೋಧನ ಇದನ್ನು ರಹಸ್ಯವಾಗಿಯೇನು ಮಾಡಿಲ್ಲ. ಪಕ್ಕದಲ್ಲೇ ಭೀಷ್ಮರಿದ್ದಾರೆ. ಅವರಿಗೆ ಕೇಳಿಸುವಂತೆಯೆ ಇವನು ದ್ರೋಣರ ಬಳಿ ಮಾತನ್ನಾಡಿದ್ದಾನೆ. ಭೀಷ್ಮರಿಗೆ ಹೇಗಾಗಿರಬೇಡ!

ತನ್ನ ಮೊಮ್ಮಗ ದ್ರೋಣರ ಬಳಿ ತನ್ನ ಬಗೆಗೆಯೆ ಅಸಮಾಧಾನ ವ್ಯಕ್ತಪಡಿಸುತ್ತಿದ್ದಾನೆ. ತಾನಾದರೋ ತನ್ನ ವಯಸ್ಸಿನ ಸ್ಥಿತಿಯನ್ನು ಮರೆತು ರಾಜಪೀಠಕ್ಕೆ ಗೌರವ ಕೊಡುವ ಒಂದೇ ಕಾರಣಕ್ಕಾಗಿ ತನ್ನ ಆತ್ಮಸಾಕ್ಷಿಗೆ ವಿರುದ್ಧವಾಗಿ ಯುದ್ಧರಂಗದ ನೇತೃತ್ವ ವಹಿಸಿದವರು. ಈ ರಾಜಪೀಠದ ರಕ್ಷೆಗಾಗಿ ತನ್ನ ಆಸೆ–ಆಕಾಂಕ್ಷೆಗಳನ್ನೆಲ್ಲ ಬಲಿಕೊಟ್ಟು ಸಿಂಹಾಸನ ತ್ಯಾಗಮಾಡಿ ಬ್ರಹ್ಮಚಾರಿಯಾಗಿ ಉಳಿದವರು. ಇಲ್ಲವಾದರೆ ಇಂದು ಭೀಷ್ಮರು ಆ ಸಿಂಹಾಸನದಲ್ಲಿ ಕೂಡಬೇಕಿತ್ತು. ಹೀಗೆ ಕುರು ವಂಶದ ಅಭಿವೃದ್ಧಿಗಾಗಿ ರಾಜಪೀಠದ ಗೌರವಕ್ಕಾಗಿ ಸರ್ವಸ್ವವನ್ನೂ ತ್ಯಾಗಮಡಿದ ಭೀಷ್ಮರ ಬಗೆಗೆ ಅವನ ಮೊಮ್ಮಗನಿಂದಲೇ ಇಂಥ ಚುಚ್ಚುಮಾತು. ಅವರಿಗೆ ಎಂಥ ವೇದನೆಯಾಗಿರಬೇಕು! ಆದರೆ ಈ ಮೂರ್ಖನಿಗೆ ತಾನು ಪ್ರಾಮಾಣಿಕವಾಗಿಯೂ ಈ ಯುದ್ಧದಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದೇನೆ, ತನ್ನ ಸ್ವಂತದ ಹಿತಾಹಿತಗಳನ್ನು ಮರೆತು ರಾಜಪೀಠದ ನಿರ್ಣಯಕ್ಕೆ ಬದ್ಧನಾಗಿದ್ದೇನೆ–ಎಂದು ಯಾವ ಮಾತಿನಿಂದ ತಿಳಿಯಪಡಿಸುವುದು?

ಇದು ಮಾತಿನಿಂದ ಹೇಳುವಂತದಲ್ಲ. ಅದಕ್ಕಾಗೆ ಭೀಷ್ಮರು ಕ್ರಿಯೆಯ ಮೂಲಕವೆ ತನ್ನ ಸಿದ್ಧತೆಯನ್ನು ಸಾರಿದರು ಎನ್ನುತ್ತದೆ ಮುಂದಿನ ಶ್ಲೋಕ :

**ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ ।**
**ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ॥೧೨॥**

[ಕುರುಕುಲ ಪಿತಾಮಹರಾದ, ವಯೋವೃದ್ಧರಾದರೂ ಪ್ರಾತಾಪಶಾಲಿಗಳಾದ ಭೀಷ್ಮರು ವಿಷಣ್ಣನಾದ ದುರ್ಯೋಧನನಲ್ಲಿ ಉತ್ಸಾಹವನ್ನು ತುಂಬುವುದಕ್ಕಾಗಿ ಗಟ್ಟಿಯಾಗಿ
ಸಿಂಹನಾದ ಗೈದು ಶಂಖವನ್ನೂದಿದರು.]

ಈ ಹಿಂದಿನ ೯ ಶ್ಲೋಕಗಳಲ್ಲಿ ದುರ್ಯೋಧನ ವಿಷಾದದ ಪರಾಕಾಷ್ಠೆಯನ್ನು ತೋಡಿಕೊಂಡಿದ್ದ. ಯುದ್ಧಮಾಡಿಯೇ ಸಿದ್ಧ ಎಂದು ಕಾಲು ಕೆದಕಿ ಬಂದವ ಯುದ್ಧ ಪ್ರಾರಂಭವಾಗುತ್ತದೆ ಎನ್ನುವಾಗ ಸೋಲಿನ ಭಯದಿಂದ ತತ್ತರಿಸುತ್ತಿದ್ದಾನೆ. ಭೀಷ್ಮರಾಗಿ ಅವರು ಈ ಬೆಳವಣಿಗೆಯಿಂದ ಒಳಗಿಂದೊಳಗೆ ಸಂತೋಷಪಟ್ಟರೂ ಸೇನಾಪತಿಯಾಗಿ ಅವರು ತನ್ನ ಕರ್ತವ್ಯ ಮಾಡಬೇಕಿತ್ತು. ದುರ್ಯೋಧನನ ವಿಷಾದವನ್ನು ತೊಡೆದು ಹಾಕಿ ಅವನಲ್ಲಿ ಸ್ಫೂರ್ತಿ ತುಂಬಬೇಕಿತ್ತು. ಅದಕ್ಕಾಗಿ ಅವರು ತರುಣರೂ ನಾಚುವಂಥ ಗಂಭೀರ ಧ್ವನಿಯಲ್ಲಿ ಅಬ್ಬರಿಸಿದರು. ಈ ರಣಗರ್ಜನೆಗೆ ಇಡಿಯ ಸೇನೆ ಮೈಯಲ್ಲ ಕಿವಿಯಾಗಿ ಸ್ಫೂರ್ತಿ ತುಂಬಿ ನಿಂತಿತು. ಅವರ ಉಚ್ಚಧ್ವನಿಯ ಸಿಂಹನಾದಕ್ಕೆ ಇಡಿಯ ಸೇನೆಯೆ ಸ್ಪಂದಿಸಿತು; ಯುದ್ಧಕ್ಕೆ ಅಣಿಯಾಯಿತು.

ಜತೆಗೆ ಶಂಖನಾದ, ಸೇನಾಪತಿ ಶಂಖ ಊದಿದನೆಂದರೆ ಯುದ್ಧಕ್ಕೆ ಅಣಿಯಾಗಿ, ಇನ್ನೇನು ಹೋರಾಟ ಪ್ರಾರಂಭವಾಗಿಬಿಡುತ್ತದೆ ಎನ್ನುವ ಸಂಕೇತ. ಅವರ ಸಿಂಹನಾದವೂ ಉಚ್ಚವಾದದ್ದು; ಶಂಖನಾದವೂ ಉಚ್ಚವಾದದ್ದು. ಎಂಥ ಸಾಮಾನ್ಯ ಸೈನಿಕನಿಗೂ ವೀರಾವೇಶ ಬರಿಸುವಂಥದು. ಹೀಗೆ ಎರಡೂ ಕಡೆಗೆ

ಅನ್ವಯವಾಗುವಂತೆ **'ಉಚ್ಚೈಃ'** ಎಂಬ ಪದವನ್ನು ಮಧ್ಯದಲ್ಲಿ ಪ್ರಯೋಗಿಸಲಾಗಿದೆ : **'ಸಿಂಹನಾದಂ ವಿನದ್ಯ ಉಚ್ಚೈಃ ಶಂಖಂ ದಧ್ಮೌ'**, [**ಸಿಂಹನಾದಂ ಉಚ್ಚೈಃ ವಿನದ್ಯ ಶಂಖಂ ಉಚ್ಚೈಃ ದಧ್ಮೌ**].

ಅಪ್ರತಿಮ ವೀರರಾದ ಭೀಷ್ಮರ ಸಿಂಹನಾದ, ಶಂಖನಾದ, ರಣಹೇಡಿಗಳಲ್ಲಿ ಗೆದೆಯುವ ಹುಮ್ಮಸ್ಸು ತುಂಬಿಸುವ ಗಂಭೀರ ನಾದ. ಅದಕ್ಕೆಂದೆ ಭೀಷ್ಮರನ್ನು **'ಪ್ರತಾಪವಾನ್'** ಎಂದು ಉಲ್ಲೇಕಿಸುತ್ತದೆ ಗೀತೆ.

ಮೊದಲು ಅವರ ವಯಸ್ಸಿಗೆ ಸಂಬಂಧಪಿಪಟ್ಟ ವಿಶೇಷಣಗಳು ಬಂದಿವೆ : ಕುರುವೃದ್ಧ ಮತ್ತು ಪಿತಾಮಹ.

ಅವರು ಕುರುವಂಶದಲ್ಲೆ ಹಿರಿಯ ವ್ಯಕ್ತಿ, ಅವರಸಷ್ಟು ವಯಸ್ಸಾದವರು, ಹಿರಿಯರು, ಅನುಭವಿಗಳು ಕುರುವಂಶದಲ್ಲಿ ಇನ್ನೊಬ್ಬರಿಲ್ಲ.

ವಾಸ್ತವವಾಗಿ ಭೀಷ್ಮರಿಗಿಂತಲು ವಯೋವೃದ್ಧರು ಆ ಸೇನೆಯಲ್ಲಿದ್ದರು. ಬಾಹ್ಲೀಕರಾಜ ಶಂತನುವಿನ ಅಣ್ಣ, ಭೀಷ್ಮಾಚಾರ್ಯರ ದೊಡ್ಡಪ್ಪ. ಬಾಹ್ಲೀಕನ ಮಗ ಸೋಮದತ್ತ ಸುಮಾರಾಗಿ ಭೀಷ್ಮಾಚಾರ್ಯರ ವಯಸ್ಸಿನವನೆ. ಸ್ವಲ್ಪ ಹಿರಿಯ ಇದ್ದರೂ ಇರಬಹುದುದು. ಆದರೆ ಅವರು ಯಾರೂ ಈಗ ಕುರುವಂಶದ ಹಿರಿಯರಾಗಿ ಉಳಿದಿಲ್ಲ. ಬಾಹ್ಲೀಕ ದೇಶದ ರಾಜನಿಗೆ ದತ್ತಕ್ಕೆ ಹೋದದ್ದರಿಂದ ಈತ ಬಾಹ್ಲೀರಾಜನೆಂದೆ ಪ್ರಸಿದ್ಧನಾದ. ಇವನ ಮಗಳು ರೋಹಿಣಿ ವಸುದೇವನ ಪತ್ನಿ; ಬಲರಾಮನ ತಾಯಿ. ಹೀಗಾಗಿ ಭೀಷ್ಮರ ದೊಡ್ಡಪ್ಪ ಕುರುವಂಶದಿಂದ ಕಳಚಿಕೊಂಡು ಬಾಹ್ಲೀಕ ವಂಶಕ್ಕೆ ಸೇರಿಹೋದ. ಸದ್ಯಕ್ಕೆ ಕುರುವಂಶದಲ್ಲಿರುವ ಅತ್ಯಂತ ಹಿರಿಯರೆಂದರೆ ಭೀಷ್ಮರೊಬ್ಬರೆ.

ಬರಿಯ ಹಿರಿಯ ಅಷ್ಟೆ ಅಲ್ಲ. ಕೌರವರಿಗೆ ಅಜ್ಜನಾಗಿ ನಿಂತು, ತಾನು ಹಕ್ಕಿನ ಸಿಂಹಾಸನ ತ್ಯಾಗ ಮಾಡಿ ಇವರನ್ನು ಬೆಳೆಸಿದವರು. ಬರಿಯ ಕೌರವರಿಗಷ್ಟೇ ಅಲ್ಲ; ಇಡಿಯ ಕುರುವಂಶಕ್ಕೆ 'ಪಿತಾಮಹ'ನೆನ್ನಿಸಿ, ಎಲ್ಲರಿಗೂ ಅಜ್ಜನಾಗಿ ಪ್ರೀತಿ–ಗೌರವಗಳನ್ನು ಗಳಿಸಿಕೊಂಡ ಮಹಾವ್ಯಕ್ತಿ.

ಈ ಎರಡು ವಿಶೇಷಣಗಳು ಭೀಷ್ಮರ ಹಿರಿತನವನ್ನು ಸಾರುವುದರ ಜೊತೆಗೆಯೇ ದುರ್ಯೋಧನನ ಸಣ್ಣತನವನ್ನು ಸ್ಫುಟಗೊಳಿಸುತ್ತದೆ. ಇಂಥ ವಂಶದ ಹಿರಿಯರ ಮುಂದೆ, ತಾನು ಯಾರ ತೊಡೆಯಲ್ಲಿ ಬೆಳೆದನೊ ಅಂಥ ಅಜ್ಜನ ಮುಂದೆ ಮೊಮ್ಮಗನಾದ ದುರ್ಯೋಧನ ಇಂಥ ಧೂರ್ತತನದ ಮಾತನ್ನಾಡಿದ! ಅವನ ಅವಿವೇಕಕ್ಕೆ ಪಾರವೇ ಇಲ್ಲ.

ಇಂಥ ಹಣ್ಣುಹಣ್ಣು ಮುದುಕ ಎಂದಾಗ ಅವರ ಯುದ್ಧ ಸಾಮರ್ಥ್ಯದ ಬಗೆಗೆ ಯಾರಿಗಾದರೂ ದುರ್ಯೋಧನನಂತೆಯೆ ಸಂಶಯ ಬರಬಾರದು ಎಂದು ಶ್ಲೋಕದ ಕೊನೆಯಲ್ಲಿ ಅವರನ್ನು **'ಪ್ರತಾಪವಾನ್'** ಎಂದು ಕರೆಯಲಾಗಿದೆ. ವಯೋಮಾನದಲ್ಲಿ ಅವರು ವೃದ್ಧರು ನಿಜ; ಆದರೆ ಅವರ ಪೌರುಷಕ್ಕೆ ಎಂದೂ ಮುಪ್ಪು ಬರಲಿಲ್ಲ. ಆ ಕಾಲದಲ್ಲಿ ಅವರನ್ನು ಎದುರಿಸಿ ಗೆದ್ದೇನೆಂಬ ಅದಟು ಯಾವ ತರುಣನಿಗೂ ಇರಲಿಲ್ಲ. ಅವರು ಯೋಗಬಲದಿಂದ ಜರೆಯನ್ನು ಗೆದ್ದ ಅಪ್ರಿತಿಮ ವೀರ. ಅವರ ಪ್ರತಾಪಕ್ಕೆ ಅವರ ಪ್ರತಾಪ ಮಾತ್ರವೇ ಸಾಟಿ. **'ಪ್ರತಾಪವಾನ್'** ಎಂಬ ಪದಕ್ಕೆ ಇಷ್ಟು ಅರ್ಥಗಳನ್ನು ಧ್ವನಿಸುವ ಶಕ್ತಿ ಇದೆ.

ಆದರೂ ದುರ್ಯೋಧನನಿಗೆ ಈ ಅಜ್ಜನ ಪ್ರಾಮಾಣಿಕತೆಯ ಬಗೆಗೆ ನಂಬಿಕೆಯಿಲ್ಲ. ಭೀಷ್ಮರನ್ನು ಸೇನಾಪತಿಯ ಪಟ್ಟದಲ್ಲಿ ಕೂಡಿಸಿಯೂ ಅವನು ದ್ರೋಣರ ಬಳಿ ವಿಷಾದವನ್ನು ತೋಡಿಕೊಳ್ಳುತ್ತಿದ್ದಾನೆ. ಈ ಹುಡುಗನಿಗೆ [ಭೀಷ್ಮರಿಗೆ ಅವನು ಹುಡುಗನಾದರೂ ಆಗ ಅವನ ವಯಸ್ಸು ೭೧]. ಉತ್ಸಾಹ ತುಂಬುವುದು

ಸೇನಾಪತಿಯಾಗಿ ತನ್ನ ಕರ್ತವ್ಯ : **"ತಸ್ಯ ಸಂಜನಯುನ್ ಹರ್ಷಂ"**. ಅದಕ್ಕಾಗಿ ಅವರ ಸಿಂಹನಾದ ಮತ್ತು ಶಂಖನಾದ.

ಈ ವೀರನಾದದಿಂದ ದುರ್ಯೋಧನನಲ್ಲಿ ಉತ್ಸಾಹ ತುಂಬಿತೋ ಇಲ್ಲವೋ ಗೊತ್ತಿಲ್ಲ. ಆದರೆ ಕೌರವರ ಸೇನೆಯ ಉತ್ಸಾಹ ತುಂಬಿ ಅದು ಯುದ್ಧಕ್ಕೆ ಸಜ್ಜಾಯಿತು ಎನ್ನುತ್ತದೆ ಮುಂದಿನ ಶ್ಲೋಕ :

**ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ ।**
**ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋಽಭವತ್ ॥೧೩॥**

[ಅನಂತರ ಶಂಖಗಳು, ಭೇರಿಗಳು, ಪಣವ–ಆನಕ–ಗೋಮುಖಗಳು ಒಮ್ಮೆಲೆ ಮಾರ್ಮೊಳಗಿದವು. ಆ ಸದ್ದು ಕಿವಿಗಡಚಿಕ್ಕುವಂತೆ ಮುಗಿಲನ್ನು ಮುತ್ತಿತು].

ಸೇನಾಪತಿಯ ನಿದೇಶಕ್ಕೆ ಇಡಿಯ ಸೇನೆ ಪ್ರತಿಕ್ರಿಯಿಸಿದ ಬಗೆಯನ್ನು ಇಲ್ಲಿ ವಿವರಿಸಲಾಗಿದೆ. ಭೀಷ್ಮರ ಶಂಖಧ್ವನಿಯನ್ನು ಆಲಿಸಿದ ಉಪವಿಭಾಗದ ಮುಖಂಡರು, ಅಕ್ಷೋಹಿಣಿಪತಿಗಳು ತಮ್ಮ ಶಂಖವನ್ನೂ ಊದಿ ತಾವು ಸಜ್ಜಾಗಿರುವುದನ್ನು ಸೇನಾಪತಿ ಭೀಷ್ಮರಿಗೆ ತಿಳಿಯಪಡಿಸಿದರು. ಹಾಗೆಯೇ ತಮ್ಮ ಸೈನಿಕರು ಸಜ್ಜಾಗಿರುವಂತೆ ಆದೇಶ ಕಳಿಸಲು ತಮ್ಮ ಕೆಳಗಿನ ಸೇನಾ ನಾಯಕರಿಗೆ ಸಂದೇಶ ಮುಟ್ಟಿಸಿದರು : **'ತತಃ ಶಂಖಾಶ್ಚ'**.

ಅನಂತರ ಸೇನೆಯ ಒಂದೊಂದು ವಿಭಾಗದಲ್ಲೂ ಈ ಸುದ್ದಿ ಮುಟ್ಟಿಸಲು ಸೇನೆಯ ಹರವಿನುದ್ದಕ್ಕು ಅಲ್ಲಲ್ಲಿ ನಿಲ್ಲಿಸಿದ ಭೇರಿಗಳು ಬಾರಿಸಲ್ಪಟ್ಟವು. ಭೇರಿ ಎಂದರೆ ಕೋಟೆ ಕೊತ್ತಳಗಳಲ್ಲಿ ಸಂದೇಶಗಳ ಸಂಕೇತಕ್ಕಾಗಿ ಇರಿಸುವ ದೊಡ್ಡ ಗಾತ್ರದ ನಗಾರಿ.

ಭೇರಿಯ ಸದ್ದು ಕಿವಿಗೆ ಬಿದ್ದಾಗ ಶಿಬಿರದಲ್ಲಿ ಅಲ್ಲಿ ಇಲ್ಲಿ ಇದ್ದ ಸೈನಿಕರೆಲ್ಲ ಮುಂದಿನ ಆದೇಶಕ್ಕೆ ಅಣಿಯಾಗಿ ನಿಂತರು. ಕವಚ ತೊಟ್ಟು ಶಸ್ತ್ರಪಾಣಿಗಳಾಗಿ ಸಜ್ಜಾಗಿ ನಿಂತರು.

ಅಷ್ಟರಲ್ಲಿ ಪಣವದ ಸದ್ದು ಕೇಳಿಸಿತು. ಪಣವ ಎಂದರೆ ಡಕ್ಕೆ ಅಥವ ತಮಟೆ. ಯಾವುದಾದರೂ ಸಂದೇಶವನ್ನು ಮುಟ್ಟಿಸುವ ಮೊದಲ ಜನರ ಗಮನವನ್ನು ಅತ್ತ ಹರಿಸಲು ಬಾರಿಸುವ ಚರ್ಮವಾದ್ಯವೇ ತಮಟೆ. ಹಿಂದೆ ರಾಜಾಜ್ಞೆಯನ್ನು ಜನರಿಗೆ ಮುಟ್ಟಿಸಲು ಇದೇ ವಿಧಾನವನ್ನು ಅನುಸರಿಸುತ್ತಿದ್ದರು. ತಮಟೆಯ ಸದ್ದು ಕೇಳಿ ಜನರು ಬೀದಿಯಲ್ಲಿ ನೆರೆಯುತ್ತಿದ್ದರು. ಅನಂತರ ಸಂದೇಶವನ್ನು ರಾಜಸೇವಕ ಓದುತ್ತಿದ್ದ. ಈ ವಾದ್ಯಾವನ್ನೆ ಇಂಗ್ಲಿಷಿನಲ್ಲಿ Tomtom ಎನ್ನುತ್ತಾರೆ. ಅದಕ್ಕೆಂದೆ ಇಂಥ ಸಂದೇಶವನ್ನು ಬೀದಿಯಲ್ಲಿ ಬಿತ್ತರಿಸುವುದಕ್ಕೆ ಟಾಂಟಾಂ ಮಾಡುವುದು ಎನ್ನುವ ಮಾತು ಬಳಕೆಯಲ್ಲಿ ಬಂತು.

ತಮಟೆಯ ಸದ್ದು ಕಿವಿಗೆ ಬಿದ್ದಾಗ ಸೈನಿಕರೆಲ್ಲ ಮುಂದಿನ ನಿದೇಶಕ್ಕಾಗಿ ಮೈಯಲ್ಲ ಕಿವಿಯಾಗಿ ಸೆಟೆದು ನಿಂತರು. ಪೂರ್ವನಿರ್ಧಾರದಂತೆ ಸೇನಾವ್ಯೂಹದ ಯಾವ ಭಾಗದಲ್ಲಿ ಯಾರು ಹೇಗೆ ನಿಲ್ಲಬೇಕು ಎನ್ನುವ ಸಂದೇಶವೂ ತಲಿಪಿತು. ಅದರಂತೆ ಸೈನಿಕರು ಯುದ್ಧದ ಕೇಂದ್ರ ಬಿಂದುವಿನತ್ತ, ಮುಂಚೂಣಿಯ ಪ್ರದೇಶಕ್ಕೆ ನಡೆಯ ತೊಡಗಿದರು. ಅವರ ನಡೆಯ ತಾಳಕ್ಕೆ ತಕ್ಕಂತೆ ಆನಕಗಳು ಬಾರಿಸಲ್ಪಟ್ಟವು.

ಮಾರ್ಚಪಾಸ್ಟ್ ಮಾಡುವಾಗ ಅದಕ್ಕೆ ತಕ್ಕಂತೆ ಬ್ಯಾಂಡ್ ಬಾರಿಸುತ್ತಾರಲ್ಲ, ಹಾಗೆಯೇ ಇದು. ಶಂಖ–ಭೇರಿ–ಪಣವಗಳು ಮಾರ್ಚಿಂಗ್ ಆರ್ಡರುಗಳು ಇದ್ದಂತೆ. ಆನಕ ನಡೆಯ ತಾಳವನ್ನು ಪ್ರಚೋದಿಸುವ ಹಿಮ್ಮೇಳ

ವಾದ್ಯ. ಆನಕ ಎಂದರೆ ಒಂದೇ ಕಡೆಯಲ್ಲಿ ಢಂ–ಢಂ ಎಂದು ಬಾರಿಸುತ್ತ ಸೈನಿಕರ ಲಯಬದ್ಧ ನಡೆಗೆ ಮಾರ್ಗದರ್ಶನ ನೀಡುವ ಬೃಹತ್‌ಗಾತ್ರದ ಚರ್ಮವಾದ್ಯ.

ಈ ಮಾಲಿಕೆಯಲ್ಲಿ ಕೊನೆಯದಾಗಿ ಬಂದ ವಾದ್ಯ ಗೋಮುಖ. ಪ್ರಾಯಃ ಕೊಂಬು ಅಥವ ಕಹಳೆಯೇ ಗೋಮುಖವಿರಬೇಕು. ಸೇನಾಪತ ಚಲನ ಮುಗಿದು ಹೋರಾಟಕ್ಕೆ ನುಗ್ಗುವ ಸನ್ನಾಹವೇ ಕೊಂಬು–ಕಹಳೆ.

ಹೀಗೆ ಹೆಜ್ಜೆಹೆಜ್ಜೆಯಾಗಿ ಕೌರವ ಸೇನೆಯ ಯುದ್ಧ ಸಿದ್ಧತೆಯನ್ನು ಈ ಪದ್ಯದಲ್ಲಿ ಬಂದ ವಾದ್ಯಗಳ ಕ್ರಮ ವ್ಯವಸ್ಥಿತವಾಗಿ ಸೂಚಿಸುತ್ತದೆ. ನೂರಾರು ಶಂಖಗಳು, ಭೇರಿಗಳು, ಪಣವ, ಆನಕ, ಗೋಮುಖಗಳು ಒಂದರ ಮೇಲೊಂದರಂತೆ ಮೊಳಗ ತೊಡಗಿದಾಗ ಇಡಿಯ ವಾತಾವರಣ ಎಂಥ ಗದ್ದಲದಲ್ಲಿ ಮುಳುಗಿತು ಎನ್ನುವುದನ್ನು ನಾಲ್ಕನೆಯ ಚರಣ ಚಿತ್ರಿಸುತ್ತದೆ : **'ಸ ಶಬ್ದಸ್ತುಮುಲೋऽಭವತ್'**.

ಆ ಧ್ವನಿ ತುಮುಲಧ್ವನಿಯಾಗಿ ದಿಗ್‌ದಿಗಂತಗಳನ್ನು ವ್ಯಾಪಿಸಿತು. ಈ ತುಮುಲ ಧ್ವನಿಗೆ ಎರಡು ಉದ್ದೇಶವಿದೆ : ಒಂದು, ತಮ್ಮ ಸೇನೆಯನ್ನು ಹುರಿದುಂಬಿಸುವುದು, ಎರಡು ಎದುರಾಳಿಗಳನ್ನು ಎದೆಗೆಡಿಸುವುದು.

ಭೀಷ್ಮರು ತನ್ನ ಶಂಖನಾದದ ಮೂಲಕ ದುರ್ಯೋಧನನ್ನು ಸಂತೈಸಲು ಪ್ರಯತ್ನಿಸಿದರು. ತಮ್ಮ ಸೇನೆಗೆ ಯುದ್ಧ ಸಿದ್ಧತೆಯ ಸಂಕೇತ ನೀಡಿದರು. ಜತೆಗೆಯೆ ಪಾಂಡವ ಸೇನೆಗೆ "ನಾವು ಸಿದ್ಧ. ನಿಮ್ಮ ಪ್ರತ್ಯುತ್ತರ ಬಂದ ಕ್ಷಣದಲ್ಲೆ ಯುದ್ಧಕ್ಕೆ ನಾಂದಿ" ಎಂದು ಸೂಚಿಸಿದರು. ಇದಕ್ಕೆ ಪಾಂಡವರ ಪ್ರತಿಕ್ರಿಯೆಯೇನು ಎನ್ನುವುದನ್ನು ಗೀತೆಯ ಮುಂದಿನ ಶ್ಲೋಕಗಳು ವಿವರಿಸುತ್ತವೆ.

ಗೀತೆಯ ಈ ಎರಡು ಶ್ಲೋಕಗಳ ಭಾವವನ್ನು ಶ್ರೀರಾಮಾನುಜರು ಹೀಗೆ ಸಂಗ್ರಹಿಸಿದ್ದಾರೆ:

**ತಸ್ಯ ವಿಷಾದಮಾಲಕ್ಷ್ಯ ಭೀಷ್ಮಸ್ತಸ್ಯ ಹರ್ಷಂ ಜನಯಿತುಂ**
**ಸಿಂಹನಾದಂ ಶಂಖಧ್ಮಾನಂ ಚ ಕೃತ್ವಾ, ಶಂಖಭೇರೀನಿನಾದೈಶ್ಚ**
**ವಿಜಯಾಭಿಶಂಸಿನಂ ಘೋಷಂ ಚಾಕಾರಯತ್ ।**

ಇದರ ಭಾವ ಹೀಗಿದೆ : ದುರ್ಯೋಧನನ ವಿಷಾದವನ್ನು ಗುರುತಿಸಿದ ಭೀಷ್ಮರು ಅವನಿಗೆ ಹರ್ಷ ಬರಿಸಲು ಸಿಂಹನಾದವನ್ನೂ ಶಂಖಧ್ವನಿಯನ್ನೂ ಮಾಡಿದರು ಮತ್ತು ಶಂಖ–ಭೇರಿ ನಿನಾದಗಳಿಂದ ವಿಜಯ ಸೂಚಕವಾದ ಧ್ವನಿಯನ್ನು ಮಾಡಿಸಿದರು.

# ಭಗವದ್ಗೀತೆ

**–ಬನ್ನಂಜೆ ಗೋವಿಂದಾಚಾರ್ಯ**

ಭೀಷ್ಮರ ಶಂಖನಾದಕ್ಕೆ, ಸಿಂಹನಾದಕ್ಕೆ, ಕೌರವ ಸೇನೆಯ ಶಂಖ–ಭೇರಿ–ಪಣವಾನಕ–ಗೋಮುಖಗಳ ನಾದಕ್ಕೆ ಮೊದಲ ಪ್ರತಿಕ್ರಿಯೆ ಶ್ರೀಕೃಷ್ಣನಿಂದ ಮತ್ತು ಅರ್ಜುನನಿನಿಂದ. ಅನಂತರ ಸಮಸ್ತ ಸೇನಾ ಪ್ರಮುಖರಿಂದ–

**ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ ।**
**ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥೧೪॥**
**ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ।**
**ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ॥೧೫॥**
**ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ ।**
**ನಕುಲಃ ಸಹದೇವಶ್ಚ ಸುಘೋಷ–ಮಣಿಪುಷ್ಪಕೌ ॥೧೬॥**
**ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ ।**
**ದೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥೧೭॥**
**ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ ।**
**ಸೌಭದ್ರಶ್ಚ ಮಹಾಬಾಹುಃ ಶಂಖಾನ್ ದಧ್ಮುಃ ಪೃಥಕ್ಪೃಥಕ್ ॥೧೮॥**

[ಅನಂತರ, ಬಿಳಿ ಕುದುರೆಯನ್ನು ಬಿಗಿದ, ಬೃಹತ್ತಾದ ರಥದಲ್ಲಿ ಕುಳಿತ ಕೃಷ್ಣ ಮತ್ತು ಅರ್ಜುನ ತಮ್ಮ ದಿವ್ಯವಾದ ಶಂಖವನ್ನು ಊದಿದರು(೧೪). ಕೃಷ್ಣ ಪಾಂಚಜನ್ಯವನ್ನೂದಿದ. ಅರ್ಜುನ ದೇವದತ್ತವನ್ನು– ಉಗ್ರಕರ್ಮನಾದ ಭೀಮಸೇನ ತನ್ನ ಹಿರಿದಾದ ಶಂಖ **'ಪೌಂಡ್ರ'**ವನ್ನೂದಿದ(೧೫). ಕುಂತೀಕುಮಾರನಾದ ರಾಜ ಯುಧಿಷ್ಠಿರನು ಅನಂತವಿಜಯವೆಂಬ ಶಂಖವನ್ನು, ನಕುಲ ಸುಘೋಷವೆಂಬ ಶಂಖವನ್ನು, ಸಹದೇವ ಮಣಿಪುಷ್ಪಕ ಎಂಬ ಶಂಖವನ್ನೂದಿದರು(೧೬). ಹಿರಿಯ ಬಿಲ್ಗಾರನಾದ ಕಾಶಿರಾಜ, ಮಹಾರಥನಾದ ಶಿಖಂಡಿ, ದೃಷ್ಟದ್ಯುಮ್ನ, ವಿರಾಟ, ಸೋಲರಿಯದ ಸಾತ್ಯಕಿ, ದ್ರೌಪದಿಯ ಐವರು ಮಕ್ಕಳು ಮಹಾವೀರನಾದ ಅಭಿಮನ್ಯು ಕೂಡ– ಹೀಗೆ ಎಲ್ಲರೂ– ಓ ನೆಲದೊಡಯನಾದ ದೃತರಾಷ್ಟ್ರನೆ, ಒಬ್ಬರ ನಂತರ ಒಬ್ಬರು ತಮ್ಮ ಶಂಖವನ್ನು ಊದಿದರು.(೧೬–೧೮)].

ಕೌರವ ಸೇನೆ ಗೊಂದಲಗೊಂಡು ಶಂಖ–ಭೇರಿ ಮುಂತಾದ ನಾದಗಳ ತುಮುಲವನ್ನೆ ನಿರ್ಮಿಸಿತು. ಆದರೆ ಪಾಡವ ಸೇನೆ ಧೃತಿಗೆಡಲಿಲ್ಲ, ಗೊಂದಲಗೊಳ್ಳಲಿಲ್ಲ, ಅವರು ಕ್ರಮವಾಗಿ ಒಬ್ಬರ ಮೇಲೊಬ್ಬರಂತೆ ೧೮ ಮಂದಿ ಶಂಖವನ್ನೂದಿ ತಾವು ಸಿದ್ಧರು ಎನ್ನುವುದನ್ನು ತಿಳಿಸಿದರು. ಯಾವಗೊಂದಲವೂ ಇಲ್ಲ; ಯಾವ ವ್ಯಗ್ರತೆಯೂ ಇಲ್ಲ. ಇಂಥ ಸಚಿದರ್ಭದಲ್ಲು ಎಂಥ ಚಿತ್ತಾವಧಾನ: ಎಂಥ ಆತ್ಮವಿಶ್ವಾಸ!

ಈ ಕಡಯಲ್ಲಿ ಶಂಖ ಊದಿದವರ ಸಂಖ್ಯೆಯೂ ತುಂಬ ಅರ್ಥಪೂರ್ಣ: **೧೮** ಮಂದಿ. ಇದೊಂದು ಅರ್ಥಪೂರ್ಣ ಸಂಖ್ಯೆ. ಭಾರತಕ್ಕು+ **೧೮**ಕ್ಕು ಅವಿನಾಭಾವದ ನಂಟು. ಎಲ್ಲಿ ಜಯ ಉಂಟೊ, ಅಲ್ಲಿ **೧೮** ಉಂಟು. ಈ ಸಂಖ್ಯೆಯ ಮೂಲಕವೆ ಸಂಜಯ ಪಾಂಡವರ ಜಯದ ಸೂಚನೆ ಕೊಟ್ಟುಬಿಟ್ಟಿದ್ದಾನೆ!

ಇದು ಗಮನಿಸಬೇಕಾದ ಮಾತು : ಮಹಾಭಾರತ ಯುದ್ಧದಲ್ಲಿ ಭಾಗವಹಿಸಿದ ಸೇನೆ **೧೮** ಅಕ್ಷೋಹಿಣಿ. ಯುದ್ಧ ನಡೆದದ್ದು **೧೮** ದಿನಗಳ ಕಾಲ. ಮಹಾಭಾರತದ ಹರವು **೧೮** ಪರ್ವಗಳಲ್ಲಿ. ಮಹಾಭಾರತದ ಸಾರಭೂತವಾದ ಗೀತೆಯಲ್ಲು **೧೮** ಅಧ್ಯಾಯಗಳು.

ಜತೆಗೆ ಇಲ್ಲಿ ದುರ್ಯೋಧನ ಪಾಂಡವರ ಕಡೆಯ ವೀರರನ್ನು ಪರಿಗಣಿಸುವಾಗ ಅವನು ಉಲ್ಲೇಖಿಸಿದ್ದು **೧೮** ಮಂದಿಯನ್ನು. ಪಾಂಡವರ ಕಡೆಯಲ್ಲಿ ಯುದ್ಧ ಸನ್ನಾಹಕ್ಕೆ ಸಮ್ಮತಿ ನೀಡಿ ಶಂಖನಾದ ಮಾಡಿದವರು **೧೮** ಮಂದಿ. ಅಚ್ಚರಿಯೆಂದರೆ ಇಲ್ಲಿಗೆ ಗೀತೆಯಲ್ಲಿ **೧೮** ಶ್ಲೋಕ ಮುಗಿದವು!

ಇದು ಯಾವುದೂ ಆಕಸ್ಮಿಕವಲ್ಲ. ಹದಿನೆಂಟರ ಅಧ್ಯಾತ್ಮದ ವಿಶ್ಲೇಷಣಕ್ಕಾಗಿಯೆ ಒಂದು ಪ್ರತ್ಯೇಕ ಪುಸ್ತಕ ಬರೆಯಬೇಕಾದೀತು. ಭಾರತೀಯ ತತ್ವಶಾಸ್ತ್ರದ ಎಲ್ಲ ಮುಖಗಳೂ ಈ ಹದಿನೆಂಟರಲ್ಲಿ ಅಡಗಿವೆ. ಎಲ್ಲವೂ ಹದಿನೆಂಟರ ಬಿತ್ತರ. ಹದಿನೆಂಟರ ಆಚೆಗೆ ಇನ್ನೇನೂ ಇಲ್ಲ.

ಎಲ್ಲ ವಿವರಗಳು ಸದ್ಯಕ್ಕೆ ಬೇಡ. ಮುಖ್ಯವಾದ ಒಂದು ಮಾತನ್ನು ಮಾತ್ರ ನೆನಪಿಟ್ಟುಕೊಳ್ಳಬೇಕು. ೧೮ ಎಂದರೆ ಜಯ. ಜ=೮, ಯ=೧, ಮೊದಲಿನದ್ದು ಏಕ : ಅನಂತರದ್ದು ದಶಕ (ಅಂಖಾನಾಂ ವಾಮತೋ ಗತಿಃ). ಅದರಿಂದ ಜಯ=೧೮. ಅದಕ್ಕೆಂದೆ ಇಡಿಯ ಭಾರತಕ್ಕೆ ಜಯ ಎಂದು ಹೆಸರು : ಜಯೋ ನಾಮೇತಿಹಾಸೋಯಮ್.

ಹೀಗೆ ಭಾರತ, ಮುಖ್ಯವಾಗಿ ಭಗವದ್ಗೀತೆ ೧೮ರ ಸಂಖೇತದ ಮೂಲಕ ಹಂತ ಹಂತವಾಗಿ ನಮ್ಮನ್ನು ಜಯದ ಮೆಟ್ಟಲಲ್ಲಿ ಮೇಲಕ್ಕೇರಿಸಿ ಸತ್ಯದ ದರ್ಶನ ಮಾಡಿಸುತ್ತದೆ. ಈ ೧೮ರ ಗಂಟು ಬಿಡಿಸಲಾರದವ ಭಗವದ್ಗೀತೆಯ ಗಂಟನ್ನೂ ಬಿಡಿಸಲಾರ. ಅವನು ಭಗವದ್ಗೀತೆಯ ಮುಂದೆ ಊದಿನ ಬತ್ತಿ ಹಚ್ಚಿ ಭಕ್ತಿ ತೋರಿಸಬಲ್ಲ. ಭಗವದ್ಗೀತೆಯನ್ನು ಹಣೆಗೊತ್ತಿಕೊಳ್ಳ ಬಲ್ಲ. ಆದರೆ ಭಗವದ್ಗೀತೆಯನ್ನು ಅರ್ಥಮಾಡಿಕೊಳ್ಳಲಾರ. ಅದರೆ ಭವದ್ಗೀತೆ ತಮಗೆ ತಿಳಿದಿಲ್ಲ ಎನ್ನುವುದೂ ಬಹಳ ಜನ ಪಂಡಿತರಿಗೆ ತಿಳಿದಿರುವುದಿಲ್ಲ.

ಕೃಷ್ಣ, ಐವರು ಪಾಂಡವರು, ಕಾಶಿರಾಜ, ವಿರಾಟ, ಸಾತ್ಯಕಿ, ದ್ರುಪದ, ದ್ರುಪದನ ಮಕ್ಕಳಾದ ಶಿಖಂಡಿ ಮತ್ತು ದೃಷ್ಟದ್ಯುಮ್ನ, ಮೊಮ್ಮಕ್ಕಳಾದ ಐವಾರು ದ್ರೌಪದೇಯರು (ಪ್ರತಿವಿಂಧ್ಯ, ಸುತಸೋಮ, ಶೃತಕೀರ್ತಿ, ಶತಾನೀಕ, ಶೃತಕರ್ಮ) ಮತ್ತು ಸುಭದ್ರೆಯ ಮಗನಾದ ಅಭಿಮನ್ಯು– ಇವರೆ ಇಲ್ಲಿ ಬಂದ **೧೮** ಮಂದಿ.

ಕೃಷ್ಣ, ಪಾಂಡವರು ಮತ್ತು ಶಿಖಂಡಿಯನ್ನು ಬಿಟ್ಟರೆ ಉಳಿದವರನ್ನು ದುರ್ಯೋಧನನೂ ಪಾಂಡವವೀರರ ಪಂಕ್ತಿಯಲ್ಲಿ ಹೆಸರಿಸಿದ್ದಾನೆ. ಅವನು ಹೇಳಿದ **೧೮** ಹೆಸರುಗಳ ಔಚಿತ್ಯವನ್ನು, ಅದರ ಹಿಂದಿರುವ ಮನೋವಿಜ್ಞಾನವನ್ನು ನಾವು ಗಮನಿಸಿದ್ದೇವೆ ಈಗ ಇಲ್ಲಿ ಬಂದ **೧೮**ರ ಒಳಬಗೆಯನ್ನು ಸ್ವಲ್ಪ ಕೆದಕಿ ನೋಡೋಣ. ಗೀತೆ ಒಂದು ಅದ್ಭುತವಾದ ಗಣಿ. ಕೆದಕಿ ಆಳಕ್ಕೆ ಇಳಿದಷ್ಟು ಗಟ್ಟಿ ಚಿನ್ನದ ಪದರು.

ಕೌರವಸೇನೆಯ ಕಡೆಯಿಂದ ಮೊದಲು ಶಂಖನಾದ ಮಾಡಿದವರು ಆ ಪಕ್ಷದ ಸೇನಾಪತಿ ಭಿಷ್ಮರು. ಈ ಕಡೆಯಿಂದ ಮೊದಲು ಪ್ರತ್ಯುತ್ತರ ಬಂದದ್ದು ಈ ಪಕ್ಷದ ಸೇನಾಪತಿ ದೃಷ್ಟದ್ಯುಮ್ನನಿಂದಲ್ಲ; ಶ್ರೀಕೃಷ್ಣನಿಂದ. ಯಾರೇ ಸೇನಾಪತಿ ಇರಲಿ ಪಾಂಡವರ ಪಕ್ಷದ ಎಲ್ಲ ನಿರ್ಧಾರಗಳ ಹೊಣೆಗಾರ, ನಾಯಕ, ಸೂತ್ರಧಾರ ಕೃಷ್ಣನಲ್ಲವೆ? ಅವನು ಸೇನಾಪತಿಗಳಿಗೂ ಸೇನಾಪತಿ. ಆ ಮಹಾಶಕ್ತಿಯ ಮುಂದೆ ಉಳಿದವರೆಲ್ಲ ಆಜ್ಞಾಧಾರಕರಾದ ನಿಮಿತ್ತ ಮಾತ್ರ. ಈ ಮಾತನ್ನು ಗೀತೆ ಪ್ರಾರಂಭದಲ್ಲೆ ಸ್ಫುಟಪಡಿಸುತ್ತದೆ. **'ಪಾಂಚಜನ್ಯಂ ಹೃಶೀಕೇಶಃ'**

ಇದೊಂದು ಸಾಟಿಯಿಲ್ಲದ ಘಟನೆ. ಯುದ್ಧ ಸೂಚನೆ ಸೇನಾಪತಿಯಿಂದಲ್ಲ. ಯಾವೊಬ್ಬ ರಥಿಕ ಯೋದ್ಧನಿಂದಲೂ ಅಲ್ಲ. ಸಾರಥಿಯಿಂದ! ಜಗತ್ತಿನಲ್ಲಿ ಇಂಥ ಒಂದು ಘಟನೆ ಇದೊಂದೆ. ಸಾರಥಿಯ ಶಂಖನಾದಕ್ಕೆ ರಥಿಯೂ ದನಿಗೂಡಿಸಿದ; **'ದೇವದತ್ತಂ ಧನಂಜಯಃ'**.

ಕೃಷ್ಣ 'ನಾವು ಯುದ್ಧಕ್ಕೆ ಸಿದ್ಧ' ಎಂದು ಭೀಷ್ಮರಿಗೆ, ಕೌರವಸೇನೆಗೆ ಸಂಕೇತ ನೀಡಿದಾಗ ಅದೇ ರಥದಲ್ಲಿ ಯುದ್ಧೋತ್ಸಾಹದಿಂದ ಕುಳಿತ ಅರ್ಜುನ ತೆಪ್ಪಗೆ ಕೂಡುವುದು ಸಾಧ್ಯವೆ? ನಾರಾಯಣನ ಪ್ರಿತಿಕ್ರಿಯೆಯ ಬೆನ್ನಲ್ಲೆ ನರನ ಪ್ರತಿಕ್ರಿಯೆ : ಅರ್ಜುನನೂ ತನ್ನ ದೇವದತ್ತವನ್ನು ಊದಿದ.

ಇದು ಕೌರವಸೇನೆಗೆ ತಮ್ಮ ಒಪ್ಪಿಗೆಯ ಸಂಕೇತವಷ್ಟೇ ಅಲ್ಲ. ಪಾಂಡವಸೇನೆಗೆ 'ಯುದ್ಧಾರಂಭಕ್ಕೆ ಸಜ್ಜಾಗಿ' ಎಂಬ ಸಂಕೇತವೂ ಹೌದು. ಅದಕ್ಕೆ ತಮ್ಮ ಸೇನೆಯಿಂದ ಬಂದ ಪ್ರತಿಕ್ರಿಯೆಯನ್ನು ಮುಂದಿನ ಶ್ಲೋಕಗಳು ವಿವರಿಸುತ್ತವೆ.

ಮೂರನೆಯ ಶಂಖಧ್ವನಿಯೂ ಸೇನಾಪತಿ ದೃಷ್ಟದ್ಯುಮ್ನನದಲ್ಲ. ಪಾಂಡವ ಸೋದರರಲ್ಲೆ ಮಹಾವೀರನಾದ, ಮುಂದಿನ ಯುದ್ಧದಲ್ಲಿ ಸಿಂಹಪಾಲು ಕೊಂಡು ಪ್ರಧಾನಪಾತ್ರವಹಿಸುವ ಭೀಮಸೇನನದ್ದು. 'ಪಾಂಡವರ ಸೇನೆ ಭೀಮಾಭಿರಕ್ಷಿತ' ಎಂಬ ದುರ್ಯೋಧನನ ಮಾತನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ಯುದ್ಧ ನಡೆಯುವ ಪ್ರಸ್ತಾವ ಬಂದಾಗ ಈ ಮೊದಲು ಶ್ರೀಕೃಷ್ಣನೂ ಭೀಮನ ಬಳಿ ಅಂದ್ದಿದ್ದ : **'ಅಸ್ಮಿನ್ ಯುದ್ಧೇ ಮಹಾವೀರ ತ್ವಯಿ ಭಾರಃ ಸಮಾಹಿತಃ'** ಮುಂದೆ ನಡೆಯಲಿರುವ ಯುದ್ಧದ ಹೊಣೆ ಪೂರ್ತಿಯಾಗಿ ನಿನ್ನ ಹೆಗಲ ಮೇಲಿದೆ.

ಭೀಮಸೇನ ಆ ಮಾತಿಗೆ ತಕ್ಕಂತೆ ನಡೆದುಕೊಂಡ. ಕೃಷ್ಣನ ಸಂಕೇತಕ್ಕೆ ತಾನೂ ದನಿಗೂಡಿಸಿದ. ಭೀಮನ ಶಂಖನಾದ ಕೇಳಿದ ಹಿರಿಯಣ್ಣ ಧರ್ಮರಾಜನೂ ತನ್ನ ಶಂಖವನ್ನು ಕೈಗೆತ್ತಿಕೊಂಡ. ಯುದ್ಧವನ್ನು ಎಂದೂ ಬಯಸದ ಅಜಾತ ಶತ್ರುವಾದ ಧರ್ಮರಾಜನೂ ಪರಿಸ್ಥಿತಿಯ ಒತ್ತಡಕ್ಕೆ ಬದ್ಧನಾಗಿ ತಾನೂ ಯುದ್ಧಕ್ಕೆ ಅಣಿಯಾದ; ಅದರ ಸೂಚಕವಾಗಿ ತಾನೂ ಶಂಖನಾದ ಮಡಿದ. ಮೂವರು ಅಣ್ಣಂದಿರ ಸಂಕೇತ ಕೇಳಿದ ಮಾದ್ರೀಪುತ್ರರಾದ ನಕುಲ–ಸಹದೇವರೂ ತಮ್ಮ ಶಂಖವನ್ನೂದಿದರು.

ಇಲ್ಲಿ ಗಮನಿಸಬೇಕಾದ ಅಂಶವೊಂದಿದೆ. ಈ ಕಡೆಯಲ್ಲಿ ಕೃಷ್ಣನ ಶಂಖನಾದಕ್ಕೆ ಪ್ರತಿಕ್ರಿಯಿಸಿದವರು ಯಾವುದೇ ಸೇನಾ ಮುಖಂಡರಲ್ಲ; ಸೇನಾಪತಿಯೂ ಅಲ್ಲ; ಯುದ್ಧದ ಮುಖ್ಯ ಪಾತ್ರದಾರಿಗಳಾದ ಪಾಂಡವರು. ಯಾರಿಂದಾಗಿ ಯುದ್ಧ ನಡೆಯಿತೋ ಅವರೇ ಪ್ರತಿಕ್ರಿಯಿಸದಿದ್ದಾಗ ಸೇನಾಪತಿ ಪ್ರಿತಿಕ್ರಿಯಿಸುವುದರಿಂದೇನು ಉಪಯೋಗ? ಪಾಂಡವರು ತಾವು ಯುದ್ಧಕ್ಕೆ ಬದ್ಧರು ಮತ್ತು ಸಿದ್ಧರು ಎಂದು ಘೋಷಿಸಿದ ಮೇಲೆ ಮುಂದೆ ಸೇನಾ ಮುಖಂಡರು ಅದಕ್ಕೆ ದನಿಗೂಡಿಸುತ್ತಾರೆ.

ಪಾಂಡವರ ಸೇನೆ ಒಂದು ಕುಟುಂಬದಂತೆ ಹೇಗೆ ಒಗ್ಗಟ್ಟಿನಿಂದ ವರ್ತಿಸಿತು ಎನ್ನುವುದನ್ನು ಇದು ತೋರಿಸುತ್ತದೆ. ತಮಗಾಗಿ ಇನ್ನೊಬ್ಬರು ಹೋರಾಡಿ ಜಯ ತಂದು ಕೊಡಬೇಕು ಎನ್ನುವ ಭಾವ ಪಾಂಡವರದಲ್ಲ. ಅವರು ಮುಂದೆ ನಿಂತು ಸಮಷ್ಟಿಯಾಗಿ ಹೋರಾಡಿದರು– **'ಅನನ್ಯಾಃ ಸರ್ವ ಏವೈತೆ ಯೌಧಾಃ ಕುಂತೀಸುತಾದಪಿ'** (ಪಾಂಡವರ ಸೈನಿಕರು ಪಾಂಡವರ ಜತೆ ಏಕೀಭಾವದಿಂದ ಹೋರಾಡಿದರು ಎನ್ನುವ ಪೌರಾಣಿಕ ಹೇಳಿಕೆ ಈ ಮಾತನ್ನು ದೃಢಪಡಿಸುತ್ತದೆ.

ಆದರೆ ಕೌರವನ ಕಡೆಯಲ್ಲಿ? ಭೀಷ್ಮರು ಶಂಖನಾದ ಮಾಡಿದರು. ದುರ್ಯೋಧನ ಮಾಡಲಿಲ್ಲ. ಅವನ ಮಕ್ಕಳು ಮಾಡಲಿಲ್ಲ. ಅನಿವಾರ್ಯವಾಗಿ ಆ ಕಡೆ ಸೇರಿಕೊಂಡ ಯಾರೋ ಬಡಪಾಯಿ ಸೇನಾಧಿಕಾರಿಗಳು ಮಾಡಿದರು. ಹೀಗೆ ಎರಡು ಕಡೆಯ ಸೇನೆಯ ಮನೋವೃತ್ತಿಯನ್ನು ಈ ಶ್ಲೋಕಗಳು ಬಹಳ ಸುಂದರವಾಗಿ ಸೆರೆಹಿಡಿಯುತ್ತವೆ.

**ಲೇಖಾಂಕ–೧೯**

# ಭಗವದ್ಗೀತೆ

**–ಬನ್ನಂಜೆ ಗೋವಿಂದಾಚಾರ್ಯ**

ಕೃಷ್ಣಾರ್ಜುನರು ಮೊದಲು ಶಂಖ ಊದಿದರು ಎನ್ನುವ ಮಾತನ್ನು ಈ ಮೊದಲು ನೋಡಿದ್ದೇವೆ. ಯುದ್ಧದ ಆ ಗೊಂದಲದಲ್ಲೂ ಅವರು ಎಷ್ಟು ನಿರಾತಂಕವಾಗಿ ಶಂಖನಾದ ಮಾಡಿ ತಮ್ಮ ಯುದ್ಧ ಸಮ್ಮತಿಯನ್ನು ಸೂಚಿಸಿದರು ಎನ್ನುವುದನ್ನು **"ತತಃ ಶ್ವೇತೈರ್ಹಯೈರ್ಯುಕ್ತೇ"** ಎನ್ನುವ ಶ್ಲೋಕ ಸುಂದರವಾಗಿ ವಿವರಿಸುತ್ತದೆ.

ಕೌರವ ಸೇನೆಯಿಂದ ಯುದ್ಧದ ಸಂಕೇತ ಬರುವ ಮೊದಲೆ ಕೃಷ್ಣಾರ್ಜುನರು ರಥವನ್ನೇರಿ ಸಜ್ಜಾಗಿ ಕುಳಿತಿದ್ದರು. ಎಂಥ ರಥ? ಬಿಳಿ ಕುದುರೆ ಬಿಗಿದ ರಥ; ಇಡಿಯ ಸೇನಾವ್ಯೂಹದಲ್ಲಿ ಎದ್ದು ಕಾಣುವಂತ ಹಿರಿಯ ಗಾತ್ರದ ರಥ. ಅದರ ಹಿರಿಮೆ ಹಲವು ಬಗೆಯದು: ಗಾತ್ರದಲ್ಲಿ ಉಳಿದ ರಥಗಳಿಗಿಂತ ಹಿರಿದು. ಎಂಥ ಆಯುಧದ ಆಘಾತಕ್ಕೂ ಜಗ್ಗದ ದೃಢತೆಯ ರಚನೆಯಿಂದಾಗಿಯೂ ಹಿರಿದು. ಮೇಲೆ ಧ್ವಜದಲ್ಲಿ ಆಂಜನೇಯನ ಸನ್ನಿಧಾನದಿಂದ ಹಿರಿದು. ಅರ್ಜುನನನ್ನು ರಥಿಕನಾಗಿ. ಕೃಷ್ಣನನ್ನು ಸಾರಥಿಯಾಗಿ ಪಡೆದ ಆ ರಥದ ಭಗ್ಯವೂ ಹಿರಿದು.

ಇಂಥ ಆ ರಥಕ್ಕೆ ನಾಲ್ಕು ಬಿಳಿಯ ಕುದುರೆಗಳುನ್ನು ಕಟ್ಟಿದರು. ಉಳಿದ ರಥಗಳಲ್ಲಿ ಕೆಂಪು ಕುದುರೆಗಳು. ಕಪ್ಪು ಕುದುರೆಗಳು; ಹಲವು ಬಣ್ಣದ ಕುದುರೆಗಳು, ಆದರೆ ಅರ್ಜುನನ ರಥದ ನಾಲ್ಕು ಕುದುರೆಗಳೂ ಶುದ್ಧ ಬಿಳಿ ಬಣ್ಣದವು. ಈ ಕುದುರೆಗಳಿಂದಲೂ ಅರ್ಜುನನ ರಥ ಎಲ್ಲಿದ್ದರೂ ಗುರುತು ಹಚ್ಚಬಹುದು. ರಥಿಕನೂ ಅರ್ಜುನ; ಕುದುರೆಗಳೂ ಅರ್ಜುನ(ಬಿಳಿ); ನಡುವೆ ಸಾರಥಿಯೊಬ್ಬ ಕೃಷ್ಣ!

ಬಿಳಿ ಎನ್ನುವುದು ಸತ್ವಗುಣದ ಸಂಕೇತ; ಶಾಂತಿಯ ಸಂಕೇತ. ಯುದ್ಧ ರಜೋಗುಣ–ತಮೋಗುಣಗಳ ಪರಿಣಾಮ; ಅಶಾಂತಿಯ ತವರು. ಈ ವಿರೋಧಾಭಾಸ ಗಮನಿಸತಕ್ಕದ್ದು. ಅರ್ಜುನ ಬಿಳಿಯ ಬಣ್ಣವನ್ನು ಮುಂದೆ ಮಾಡಿಕೊಂಡು ಹೋರಾಟಕ್ಕಿಳಿದವನು. ಇದು ಶಾಂತಿಗಾಗಿ ಯುದ್ಧ: ಅಶಾಂತಿಗಾಗಿ ಅಲ್ಲ. ಇದು ಧರ್ಮಕಾಗಿ ನಡೆದ ಸಾತ್ವಿಕ ಯುದ್ಧ. ಅದಕ್ಕೆಂದೆ ಕೃಷ್ಣನ ಸಾರಥ್ಯ. ಹೀಗೆ ಈ ಕುದುರೆಯ ಬಣ್ಣಗಳು ಯುದ್ಧದ ಹಿನ್ನೆಲೆಯಲ್ಲಿ ಅರ್ಜುನನ ಮನೋವೃತ್ತಿಯನ್ನು ಬಿಂಬಿಸುವ ಬಣ್ಣಗಳು. ಎಂಥ ಮನಸ್ಸೋ ಅಂಥ ಕುದುರಗಳು. ಬಣ್ಣದ ಆಯ್ಕೆಯಿಂದ ವ್ಯಕ್ತಿಯ ಮನೋವೃತ್ತಿಯನ್ನು ತಿಳಿಯಬಹುದು ಎನ್ನುವುದು ಮನಃಶಾಸ್ತ್ರಜ್ಞರಿಗೆ ತಿಳಿದಿರುವ ಸಂಗತಿ.

ಹೀಗೆ ನಾಲ್ಕು ಬಿಳಿ ಕುದುರೆಗಳನ್ನು ಬಿಗಿದ (ಶ್ವೇತೈರ್ಹಯೈರ್ಯುಕ್ತೇ), ಎಂದೂ ಸೋಲರಯದ ಮಹಾರಥದಲ್ಲಿ (ಮಹತಿ ಸ್ಯಂದನೇ) ಕೃಷ್ಣಾರ್ಜುನರು ಆರಾಮವಾಗಿ ಆಸೀನರಾಗಿದ್ದಾರೆ (ಸ್ಥಿತೌ). ಆಗ (ತತಃ) ಕೃಷ್ಣಾರ್ಜುನರು (ಮಾಧವಃ ಪಾಂಡವಶ್ಚೈವ) ತಮ್ಮ ದಿವ್ಯ ಶಂಖವನ್ನು ಊದಿ ಪ್ರತ್ಯುತ್ತರ ನೀಡಿದರು (ದಿವ್ಯೌ ಶಂಖೌ ಪ್ರದಧ್ಮತುಃ).

ಈ ಇಡಿಯ ಶ್ಲೋಕದಲ್ಲಿ ಒಂದು ವಿಚಿತ್ರವಾದ ಅಧ್ಯಾತ್ಮಿಕ ಧ್ವನಿ ಪ್ರತಿಧ್ವನಿಸುತ್ತಿದೆ. ಅಧ್ಯಾತ್ಮದ ಭಾಷೆಯಲ್ಲಿ ರಥವೆಂದರೆ ಈ ಸಾಧನ ಶರೀರ. [ಸಾಮಾನ್ಯವಾಗಿ ಎಲ್ಲ ಶರೀರವೂ ಸ್ಯಂದನವೆ; ವಿಷಯಗಳ ಕಡೆಗೆ ಹರಿಯುವ ರಥವೆ: **"ಸ್ಯಂದತ ಇತಿ ಸ್ಯಂದನಮ್"**. ಮಹತ್ತಾದ ಸ್ಯಂದನವೆಂದರೆ ಮನುಷ್ಯ ಶರೀರ]. ಅದರಲ್ಲಿ ಪಯಣಿಸ ಹೊರಟ ಜೀವನೇ ರಥಿಕ. ಆದರೆ ವಾಸ್ತವಾರ್ಥದಲ್ಲಿ ಜೀವ ಬರಿಯ ಪಥಿಕ. ಅದನ್ನು ಸಾರಥಿಯಾಗಿ ಮುನ್ನಡೆಸುವ ಭಗವಂತನೆ ನಿಜವಾದ ರಥಿಕ. **"ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ಚ"** ಎನ್ನುತ್ತದೆ ಕಠೋಪನಿಷತ್ತು. ಇಂಥ ರಥಕ್ಕೆ ಬಿಗಿದ ನಾಲ್ಕು ಬಿಳಿಯ ಕುದುರೆಗಳು ಎಂದರೆ ನಾಲ್ಕು ವೇದಗಳು. [ಅದಕ್ಕೆಂದೆ ವೇದಗಳನ್ನು ಉಪದೇಶಿಸುವ ರೂಪ ಹಯಗ್ರೀವ]. ಇನ್ನೊಂದು ಅರ್ಥದಲ್ಲಿ, ಕಠೋಪನಿಷತ್ತೇ ಹೇಳುತ್ತದೆ. ಎರಡು ಕಣ್ಣು, ಎರಡು ಕಿವಿ ಇವೇ ಅಧ್ಯಾತ್ಮ

ಜ್ಞಾನ ಸಾಧನವಾದ ನಾಲ್ಕು ಕುದುರೆಗಳು: **"ಇಂದ್ರಿಯಾಣಿ ಹಯಾನ್ಯಾಹುಃ"**. ಕಪ್ಪು ಕುದುರೆಗಳು ತಮೋಗುಣದ ಪ್ರತೀಕ. ಕೆಂಪು ಕುದುರೆಗಳು ರಜೋಗುಣದ ಪ್ರಿತೀಕ. ಬಿಳಿ ಕುದುರೆಗಳು ಸತ್ವ ಗುಣೋನ್ಮೇಷದ ಪ್ರತೀಕ.

ನಮ್ಮ ಅಧ್ಯಾತ್ಮ ಸಾಧನೆಯಲ್ಲು ನಾವು ಶರೀರವೆಂಬ ರಥದಲ್ಲಿ ಪಯಣಿಸುತ್ತೇವೆ. ಅದಕ್ಕೆ ನಾಲ್ಕು ವೇದಗಳೆಂಬ, ಅಥವಾ, ಜ್ಞಾನದಾಹಿಯಾದ ಸಾತ್ವಿಕ ಕಣ್ಣು ಕಿವಿಗಳೆಂಬ ನಾಲ್ಕು ಬಿಳಿಕುದುರೆಗಳನ್ನು ಬಿಗಿದು ಪಯಣ ಸಾಗಿದಾಗ ಭಗವಂತನೇ ಸಾರಥಿಯಾಗಿ ನಮ್ಮನ್ನು ಸಾಧನಪಥದಲ್ಲಿ ಮುನ್ನಡೆಸಬೇಕು. ಅನಾಹತ ಚಕ್ರದಲ್ಲಿ ಓಂಕಾರದ ಶಂಖನಾದವನ್ನು ಭಗವಂತ ಮೊಡಿಸಬೇಕು. ಆಗ ಅತ್ಮವೂ ಅದನ್ನು ಅನುರಣಿಸುತ್ತದೆ. ಇದೇ ಆಸುರೀ ಶಕ್ತಿಯ ವಿಜಯದ ಸಂಕೇತವಾಗುತ್ತದೆ.

ಇಲ್ಲಿ ರಥ ಎನ್ನುವ ಅರ್ಥದಲ್ಲಿ 'ಸ್ಯಂದನ' ಪದವನ್ನು ಬಳಸಿರುವುದು ತುಂಬ ಅರ್ಥಪೂರ್ಣ. ಸ್ಯಂದನ ಎಂದರೆ ಹರಿಯುವಂಥದು. ವಿಷಯಗಳತ್ತ ಹರಿಯುವಂಥದು ಶರೀರ, ಶತ್ರುಗಳ ಕಡೆಗೆ ನುಗ್ಗುವಂಥದು ರಥ.

ಕುದುರೆ, ಇಂದ್ರಿಯ ಮತ್ತು ವೇದಗಳನ್ನು ಧ್ವನಿಸುವ ಹಯಶಬ್ದವೂ ಹಾಗೆಯೆ: [**ಹಯ ಗತೌ ಅಥವಾ ಹಿ ಗತೌ**]. ಹಯ ಎಂದರೆ ವೇಗವಾಗಿ ಧಾವಿಸುವಂಥದು ಅಥವಾ ತಿಳಿಸುವಂಥದು. ವೇಗವಾಗಿ ದಾರಿಯನ್ನು ಧಾವಿಸುವ ಹಯ ಕುದುರೆ. ವಿಷಯಗಳತ್ತ ಧಾವಿಸುವ ಹಯ ಇಂದ್ರಿಯ. ಭಗವಂತನತ್ತ ಧಾವಿಸುವ ಅಥವಾ ಭಗವಂತನನ್ನು ತಿಳಿಸುವ ಹಯ ವೇದ.

ಮತ್ತೆ ಯುದ್ಧರಂಗಕ್ಕೆ ಬರೋಣ. ಶಂಖವನ್ನು ಊದಿದವರಲ್ಲಿ ಒಬ್ಬ ಮಾಧವ ಇನ್ನೊಬ್ಬ ಪಾಂಡವ. ಇದು ವಂಶದ ಹಿರಿಮೆಯನ್ನು ಸೂಚಿವ ಪದ. ಒಬ್ಬ ಮಧು ವಂಶದ ವೀರ, ಇನ್ನೊಬ್ಬ ಪಾಂಡು ವಂಶದ ವೀರ.

ಕೃಷ್ಣ ಯದುವಂಶದಲ್ಲಿ ಜನಿಸಿದವ ಯಾದವ. ಯದುವಂಶದ ವೀರರಲ್ಲಿ ಕಾರ್ತವೀರ್ಯಾರ್ಜುನ ತುಂಬ ಖ್ಯಾತನಾದ. ಮಧು ಅವನ ಮಗ, ಅವನಿಂದ ಯಾದವ ವಂಶ ಮತ್ತೆ ಬೆಳದು ಬಂತು, ಅಂಥ ವಂಶಕ್ಕೆ ಹಸರು ತಂದವನೆ ಮಾಧವ. ಪಾಂಡು ಸಚಿತತಿಯ ಕೀರ್ತಿ ಬೆಳಗಿದವ ಪಾಂಡವ.

ವಸ್ತುತಃ ಪಾಂಡವಿನ ಐವರು ಮಕ್ಕಳು ಪಾಂಡವರೆ. ಆದರೆ ಮಾಧವನ ಜತೆಯಾಗಿ ಬಂದಾಗ ಅರ್ಜುನನೆ ಮುಖ್ಯವಾಗಿ ಪಾಂಡವನೆನಿಸುತ್ತಾನೆ. ನರ–ನಾರಾಯಣರ ಜೋಡಿಯಲ್ಲವೇ ಅವರು? ಅದಕ್ಕೆಂದೆ ಗೀತೆ ಅವರನ್ನು ಸಂಯುಕ್ತವಾಗಿ ಉಲ್ಲೇಖಿಸುತ್ತದೆ: **"ಮಾಧವಃ ಪಾಂಡವಶ್ಚೈವ"**. [ಪಾಂಡುವಿನ ಮಗನಾದ್ದರಿಂದ ಪಾಂಡವ; ಪಾಂಡು ವರ್ಣದವನಾದ್ದರಿಂದಲೂ ಪಂಡವ.]

ಪಾಂಡವ ಎಂದು ಸಾಮಾನ್ಯವಾಗಿ ನಿರ್ದೇಶಿಸಿದ್ದನ್ನೇ ಮುಂದಿನ ಶ್ಲೋಕ ಧನಂಜಯನೆ ಈ ಪಾಂಡವ ಎಂದು ಸ್ಫುಟಪಡಿಸುತ್ತದೆ.

[ಅಷ್ಟೆ ಅಲ್ಲ; ಪಾಂಡವ ಎನ್ನುವ ಶಬ್ದ ಒಂದು ವಿಶಿಷ್ಟವಾದ ಅರ್ಥವಿವಕ್ಷೆಯಿಂದ ಅರ್ಜುನನ ಪರ್ಯಾಯ ನಾಮವೂ ಹೌದು. ವೈದಿಕ ಸಂಸ್ಕೃತದಲ್ಲಿ ಒಂದು ನಿಯಮವಿದೆ: **ತೃತೀಯೋऽತಿಶಯೇ**. ಮೂರನೆಯ ಅಕ್ಷರ ಅಧಿಕ್ಯಾರ್ಥದಲ್ಲಿ ಬರುತ್ತದೆ ಎಂದು ಈ ಸೂತ್ರದ ಅರ್ಥ. ಇದರಂತೆ ಪಾಂಡವ ಶಬ್ದಕ್ಕೆ ಒಂದು ಹೊಸ ಆಯಾಮ ಬಂತು. ಪಾಂಡರ ಎಂಬ ಶಬ್ದದಲ್ಲಿ ಕೊನೆಯ ರೇಫದ ಬದಲು ಅದರ ಮೂರನೆಯ ಅಕ್ಷರ ವಕಾರ ಬಂದರೆ ಪಾಂಡವ ಎಂಬ ರೂಪವಾಗುತ್ತದೆ. ಪಾಂಡರ ಎಂದರೂ ಅರ್ಜುನ ಎಂದರೂ ಒಂದೇ ಅರ್ಥ. ಬಿಳಿ ಬಣ್ಣದ ಪಾಂಡರ, ಅವನೇ ಅರ್ಜುನ. ಅತಿಶಯ

ಪಾಂಡರನೇ ಪಾಂಡವ. ಕುದುರೆಗಳ ಬಿಳುಪಿನ ಜತೆಗೆ ಅರ್ಜುನನ ಸಾತ್ವಿಕತೆಯನ್ನೂ ಸಾಬೀತು ಮಾಡುವ ವಿಶಿಷ್ಟ ಪದ ಇದು].

ಮಾಧವ ಎನ್ನುವ ಶಬ್ದ ಮಧುವಂಶದಲ್ಲಿ ಜನಿಸಿಸ ನಿಮಿತ್ತ ಕೃಷ್ಣನಿಗೆ ಬಂದ ಹೆಸರು ಎನ್ನುವುದನ್ನು ಈ ಮೊದಲು ನೋಡಿದೆವು. ಮಾಧವ ಎನ್ನುವಂತೆ, ವಾರ್ಷ್ಣೇಯ ಎನ್ನುವಂತೆ ಈ ಶಬ್ದದ ಹರವು ಇಲ್ಲಿಗೇ ಮುಗಿದಿಲ್ಲ. ಕೃಷ್ಣಾವತಾರಕ್ಕಿಂತ ಪೂರ್ವದಲ್ಲು ಭಗವಂತನಿಗೆ ಈ ಹೆಸರಿತ್ತು. ಕೇಶವಾದಿ ೨೪ ಮೂರ್ತಿಗಳಲ್ಲೂ ಈ ಹೆಸರು ಬಂದಿದೆ. ಇದು ಭಗವಂತನ ಮೂಲ ರೂಪದ ಹೆಸರೂ ಹೌದು. ಅವತಾರ ರೂಪ ಬೇರೆಯಲ್ಲ: ಭಗವಂತನ ಮೂಲರೂಪ ಬೇರೆಯಲ್ಲ ಎನ್ನುವ ಅರ್ಥವನ್ನು ಈ ಪದ ಸಮರ್ಥವಾಗಿ ಧ್ವನಿಸುತ್ತದೆ. 'ಮಾಧವ' ಪದದ ಅರ್ಥವಿಶೇಷಗಳನ್ನು ಗಮನಿಸಿದರೆ ಈ ಮಾತು ಇನ್ನಷ್ಟು ಸ್ಫುಟವಾಗುತ್ತದೆ:

೧. ಮಾ=ಲಕ್ಷ್ಮೀ, ಮಾ+ಧವ=ಲಕ್ಷ್ಮೀಪತಿ.
೨. ಸೃಷ್ಟಿಯ ಆದಿಯಲ್ಲಿ ಮಧುನಾಮಕ ದೈತ್ಯನನ್ನು ಕೊಂದವನು.
(ಕೇಶಿಯನ್ನು ಕೊಂದವ ಕೇಶವ ಎಂದಂತೆ).
೩. ಮಾ=ಸಂಪತ್ತು. ಅದಕ್ಕೆ ಧವ=ಸ್ವಾಮಿ. ಸರ್ವೇಶ್ವರ.
೪. ಅವನಿಗಿಂತ ಉತ್ತಮನಾದ, ಇನ್ನೊಬ್ಬ ಸ್ವಾಮಿಯಿಲ್ಲದವ: ಸರ್ವೋತ್ತಮ.
(ಮಾ=ನ ವಿದ್ಯೆತೇ ಧವಃ ಯಸ್ಯ).
೫. ಮಾ=ಶ್ರುತಿ ಪ್ರಮಾಣಗಳು. ಅವುಗಳಿಗೆ ಸ್ವಾಮಿ: ಸಾರ್ವವೇದ ವೇದ್ಯ.
೬. ವೇದ ಪ್ರತಿಪಾದ್ಯವಾದ ಮಧು ವಿದ್ಯೆಯಿಂದ ವೇದ್ಯನಾದವ.
೭. ಮಧು=ಆನಂದ, ಮಾಧವ=ಆನಂದಪೂರ್ಣ; ಆನಂದಮಯ.
೮. ಧವ=ಭಯ-ಕಂಪ. ಧುಞ್ ಕಂಪೇ. ಶತ್ರುಗಳಿಗೆ ಅಂಜದವ. **"ತದೇಜತಿ ತನ್ನೇಜತಿ"**.
೯. ಮಧು ಚೈತ್ರಮಾಸ, ಆ ಮಾಸದಲ್ಲಿ ರಾಮನಾಗಿ ಅವತರಿಸಿದವ.
೧೦. ಮಧು ವಂಶದಲ್ಲಿ ಕೃಷ್ಣನಾಗಿ ಅವತರಿಸಿದವ.

ಈ ಪದದ ಹತ್ತಾರು ಅರ್ಥಗಳಲ್ಲಿ ಇವು ಮುಖ್ಯವಾದವು. ಇಂಥ ಗುಣ ಪೂರ್ಣನಾದ ಸರ್ವೇಶ್ವರನಲ್ಲದೆ ಇನ್ನಾರು ಮೊದಲು ಶಂಖವನ್ನೂದಬೇಕು?

ಕೃಷ್ಣಾರ್ಜುನರು ಮೊದಲು ಶಂಖವನ್ನೂದುವುದಕ್ಕೆ ಅವರ ವ್ಯಕ್ತಿತ್ವದ ವೈಶಿಷ್ಟ್ಯದ ಜತೆಗೆ ಶಂಖದ ವೈಶಿಷ್ಟ್ಯವೂ ಕಾರಣ ಎನ್ನುತ್ತದೆ ಮುಂದಿನಮಾತು: **"ದಿವ್ಯೌ ಶಂಖೌ"**.

ಉಳಿದವರ ಶಂಖ ಲೌಕಿಕವಾದದ್ದು. ಇವರಿಬ್ಬರ ಶಂಖ ಅಲೌಕಿಕವಾದದ್ದು. ದಿವ್ಯವಾದದ್ದು, ಅಸಾಮಾನ್ಯವಾದದ್ದು, ಬರಿಯ ಮನುಷ್ಯ ಲೋಕಕ್ಕೆ ಸಂಬಂಧಪಟ್ಟದಲ್ಲ, ದೇವಲೋಕಕ್ಕೆ ಸಂಬಂಧಪಟ್ಟ ಹಿರಿಯ ಇತಿಹಾಸ ಉಳ್ಳದ್ದು. ಆ ಇತಿಹಾಸ ಏನು ಎನ್ನುವುದು ಮುಂದಿನ ಶ್ಲೋಕದಲ್ಲಿ ಬರುವ ಆ ಶಂಖಗಳ ಹೆಸರಿನಿಂದ ಸ್ಫುಟವಾಗುತ್ತದೆ. ಶಂಖಧ್ವನಿಯೇ ಮಾಂಗಲಿಕ. ಇದು ದೇವಲೋಕದ ಶಂಖ ಎಂದಮೇಲೆ ಮತ್ತೆ ಕೇಳಬೇಕೆ? ಈ ಶಂಖ ಧ್ವನಿಯೇ ಮುಂದೆ ನಡೆಯುವ ಮಹಾಯುದ್ಧಕ್ಕೆ ಯುಕ್ತವಾದ ಮಂಗಲಾಚರಣೆ.

ಯುದ್ಧಾರಂಭದಲ್ಲಿ ಎಲ್ಲ ಬಿಟ್ಟು ಶಂಖನಾದ ಏಕೆ ಮಾಡುತ್ತಿದ್ದರು ಎನ್ನುವ ಜಿಜ್ಞಾಸೆಗೂ ಇಲ್ಲಿ ಉತ್ತರವಿದೆ. ಪ್ರಾಚೀನರು ಶಂಖಧ್ವನಿಯನ್ನು ಪರಮ ಮಂಗಳ ಎಂದು ಭಾವಿಸಿದ್ದರು. ಶಂಖ ಲಕ್ಷ್ಮಿಯ ಸನ್ನಿಧಾನಕ್ಕೆ ಪಾತ್ರವಾದ ಪೂಜಾರ್ಹ ವಸ್ತು. ಅದರ ಧ್ವನಿ ವೀಣೆಯ ನಾದದಂತೆ, ಕೊಳಲಿನ ನಾದದಂತೆ ಪರಮ ಮಂಗಳ; ಶುಭ ಸೂಚಕ. ಜತೆಗೆ

ಅಶುಭ ನಿವಾರಕ ಕೂಡ. ಶಂಖಧ್ವನಿ ಕೇಳಿಸುವಷ್ಟು ದೂರ ಆಸುರೀ ಶಕ್ತಿಗಳು ಸುಳಿಯುವುದಿಲ್ಲ ಎಂದು ಶಾಸ್ತ್ರಗಳು ಸಾರುತ್ತದೆ. ಅದಕ್ಕೆಂದೆ ಸಂಧ್ಯಾಕಾಲದಲ್ಲಿ ಮನೆಯ ಎಲ್ಲ ಕೋನಗಳಲ್ಲಿ ನಿಂತು ಶಂಖ ಊದುವ ಸಂಪ್ರದಾಯ.

**ಗರ್ಭಾ ದೇವಾರಿನಾರೀಣಾಂ ವಿಶೀರ್ಯಂತೆ ಸಹಸ್ರಧಾ ।**
**ತವ ನಾದೇನ ಪಾತಾಳೆ ಪಾಂಚಜನ್ಯ ನಮೋऽಸ್ತು ತೇ ॥**

"ನಿನ್ನ ನಾದದಿಂದ ಆಸುರೀ ಶಕ್ತಿಗಳ ಬಸಿರೇ ಬಿರಿದು ಹೋಗುತ್ತದೆ. ಓ ಪಾಂಚಜನ್ಯವೆ ನಿನಗೆ ನಮಸ್ಕಾರ"– ಎನ್ನುತ್ತದೆ ಪುರಾಣ ವಚನ.

ಶಂಖ ದರ್ಶನದಿಂದಲೆ ಪಾಪ ಪರಿಹಾರ ಎನ್ನುತ್ತದೆ ಇನ್ನೊಂದು ವಚನ:

**ದರ್ಶನಾದೇವ ಶಂಖಸ್ಯ ಕಿಂ ಪುನಃ ಸ್ಪರ್ಶನೇನ ಚ ।**
**ವಿಲಯಂ ಯಾಂತಿ ಪಾಪಾನಿ ತಮಃ ಸೂರ್ಯೋದಯೇ ಯಥಾ ॥**

ಶಂಖವನ್ನು ಕಂಡರೆ ಸಾಕು– ಸೂರ್ಯನ ಮುಂದೆ ಕತ್ತಲು ಹೇಗೆ ಹಾಗೆ ಪಾಪಗಳೆಲ್ಲ ಕರಗಿ ಬಿಡುತ್ತವೆ. ಸ್ಪರ್ಶಿಸಿದರಂತು ಬೇರೆ ಹೇಳಬೇಕೆ?

ಶಂಖದಲ್ಲಿ ಸಮಸ್ತ ದೇವತೆಗಳೂ ಇದ್ದು ನಮ್ಮನ್ನು ಹರಸುತ್ತಿದ್ದಾರೆ ಎನ್ನುತ್ತದೆ ಇನ್ನೊಂದು ಪ್ರಮಾಣ ವಚನ:

**ಶಂಖಂ ಚಂದ್ರಾರ್ಕ ದೈವತ್ಯಂ ಮಧ್ಯೇ ವರುಣದೈವತಮ್ ।**
**ಪೃಷ್ಠೇ ಪ್ರಜಾಪತಿಸ್ತತ್ರ ಅಗ್ರೇ ಗಂಗಾಸರಸ್ವತೀ ॥**
**ತ್ರೈಲೋಕ್ಯೇ ಯಾನಿ ತೀರ್ಥಾನಿ ವಾಸುದೇವಸ್ಯ ಚಾಜ್ಞಯ ।**
**ಶಂಖೇ ತಿಷ್ಠಂತಿ ವಿಪ್ರೇಂದ್ರ ತಸ್ಮಾಚ್ಛಂಖಂ ಪ್ರಪೂಜಯೇತ್ ॥**

"ಶಂಖದ ತುದಿ ಬುಡಗಳಲ್ಲಿ ಸೂರ್ಯ–ಚಂದ್ರರಿದ್ದಾರೆ. ಮಧ್ಯದಲ್ಲಿ ಸಮುದ್ರ ದೇವತೆಯಾದ ವರುಣ. ಬೆಂಗಡೆ ಚತುರ್ಮುಖ ಬ್ರಹ್ಮ. ಮುಂಗಡೆ ಗಂಗೆ–ಸರಸ್ವತಿಯರು. ಅಷ್ಟೆ ಅಲ್ಲ; ಮೂರು ಲೋಕಗಳಲ್ಲಿರುವ ಎಲ್ಲ ಪುಣ್ಯತೀರ್ಥಗಳ ದೇವತೆಗಳು ನಾರಾಯಣನ ಆಜ್ಞೆಯಂತೆ ಶಂಖದಲ್ಲಿ ನೆಲೆಸಿದ್ದಾರೆ. ಅದರಿಂದ ಮಾಂಗಲಿಕವಾದ ಶಂಖವನ್ನು ಗೌರವದಿಂದ ಆರಾಧಿಸಬೇಕು".

ಈ ಎಲ್ಲ ಮಾತುಗಳಿಂದ ಶಂಖದ ಮಹತ್ವ ನಮಗೆ ಅರಿವಾಗುತ್ತದೆ. ಶಂಖದ ಓಂಕಾರನಾದದ ಮಾಂಗಲಿಕತೆಯೆ ಯುದ್ಧಾರಂಭದಲ್ಲಿ ಅದನ್ನು ಬಳಸಲು ಕಾರಣವಾಯಿತು. ಯುದ್ಧ ಮಂಗಲಾಂತವಾಗಲಿ; ಆಸುರೀ ಶಕ್ತಿಗಳು ನಮ್ಮನ್ನು ದಾರಿ ತಪ್ಪಿಸಿ ದುರಂತದತ್ತ ಒಯ್ಯದಿರಲಿ; ಶಂಖದಲ್ಲಿರುವ ಸಮಸ್ತ ದೇವತೆಗಳೂ ನಮ್ಮನ್ನು ಶುಭದತ್ತ, ಮಂಗಲದತ್ತ ಕೊಂಡೊಯ್ಯಲಿ ಎನ್ನುವ ಹರಕೆಯೊಡನೆ ಯುದ್ಧ ಪ್ರಾರಂಭವಾಗುತ್ತದೆ. ಅದಕ್ಕಾಗಿ ಯುದ್ಧಾರಂಭದಲ್ಲಿ ಶಂಖನಾದ.

ಪಾಂಡವರ ಪಾಲಿಗಂತು ಈ ಮಂಗಲಾಚರಣೆ ಅನನ್ಯವಾದದ್ದು. ಮೊದಲು ಶಂಖ ಊದಿದ್ದು ನರಮಾತ್ರನಲ್ಲ; ನಾರಾಯಣ. ಅದೂ ಅಂಥಿಂಥ ಶಂಖವಲ್ಲ. ಶಂಖರಾಜನಾದ ಪಾಂಚಜನ್ಯ. ಭಗವಂತನ ಮೂಲರೂಪದಲ್ಲು ಅವನ ಕೈಯಲ್ಲಿ ಶೋಭಿಸಿದ ಶಂಖ. ಇದು ಪಾಂಡವರ ವಿಜಯಕ್ಕಾಗಿ ಕೃಷ್ಣನ ಕೈಯಲ್ಲಿ ನಿನದಿಸುತ್ತಿದೆ.

❁❁❁❁

# ಭಗವದ್‌ಗೀತೆ

**–ಬನ್ನಂಜೆ ಗೋವಿಂದಾಚಾರ್ಯ**

ಕೃಷ್ಣಾರ್ಜುನರ ಶಂಖ ದೇವಲೋಕಕ್ಕೆ ಸಂಬಂಧಪಟ್ಟದ್ದು–'**ದಿವ್ಯ**' ಎಂದು ಹಿಂದಿನ ಶ್ಲೋಕದಲ್ಲಿ ಬಂದಿದೆ: "**ದಿವ್ಯೌ ಶಂಖೌ**". ಅದರ ವಿವರಣೆ ಮುಂದಿನಶ್ಲೋಕದ ಪೂರ್ವಾರ್ಧ:

**ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ।**

ಕೃಷ್ಣನ ಶಂಖ '**ಪಾಂಚಜನ್ಯ**' : ಮೂಲರೂಪದಲ್ಲೂ ಭಗವಂತನ ಕೈಯಲ್ಲಿ ಶೋಭಿಸುವ ಶಂಖ. ಅರ್ಜುನನದು '**ದೇವದತ್ತ**' : ದೇವಲೋಕದಿಂದ ತಂದ ಶಂಖ; ದೇವತೆಗಳು ಕೊಟ್ಟ ಶಂಖ.

ಮೊದಲು ಪಂಚಜನ್ಯದ ಬಗೆಗೆ ನೋಡೋಣ. ಕೃಷ್ಣನಿಗೆ ಈ ಪಾಂಚಜನ್ಯ ದೊರೆತ ಬಗೆಯನ್ನು ಭಾಗವತ ಹೀಗೆ ವರ್ಣಿಸುತ್ತದೆ.

ಕೃಷ್ಣ ಆಚಾರ್ಯ ಸಾಂದೀಪನಿಯ ಬಳಿ ವಿದ್ಯಾಭ್ಯಾಸ ಮಾಡಿದ. ವಿದ್ಯಾಭ್ಯಾಸ ಮುಗಿಸಿ ಹೊರಡುವಾಗ "ಗುರುದಕ್ಷಿಣೆಯಾಗಿ ಏನು ಕೊಡಲಿ" ಎಂದು ಗುರುವನ್ನು ಕೇಳಿದ. ಶಿಷ್ಯನ ಮಹಿಮೆಯನ್ನರಿತ ಗುರು "ಪ್ರಭಾಸದಲ್ಲಿ ಕಡಲಲ್ಲಿ ಮುಳಿಗಿ ಸತ್ತ ತನ್ನ ಮಗನನ್ನು ಬದುಕಿಸಿ ಕೊಡು" ಎಂದು ಕೇಳಿದ. ಕೃಷ್ಣ ಒಪ್ಪಿಕೊಂಡು ಪ್ರಭಾಸಕ್ಕೆ ತೆರಳಿದ. ಅಲ್ಲಿ ಗುರುಪುತ್ರನನ್ನು ಕೊಂದವನು ಶಂಖಮತ್ಸ್ಯ(ಒಂದು ಜಾತಿಯ ಮೊಸಳೆ)ದ ರೂಪದಲ್ಲಿದ್ದ 'ಪಂಚಜನ'ನೆಂದು ವರುಣದೇವನಿಂದ ತಿಳಿಯಿತು. ಕೃಷ್ಣ ಕಡಲಿನ ತಳಕ್ಕಿಳಿದು ಪಂಚಜನನೆಂಬ ಅಸುರನನ್ನು ಕೊಂದ. ಅವನ ಒಡಲಲ್ಲಿದ್ದ ಶಂಖವನ್ನು ತಂದ. '**ಪಂಚಜನ**'ನ ಒಡಲಲ್ಲಿ ದೊರಕಿದ್ದರಿಂದ ಅದಕ್ಕೆ ಪಾಂಚಜನ್ಯವೆಂದು ಹೆಸರಾಯಿತು.
[ಈ ಅಸುರ ಪ್ರಹ್ಲಾದನ ಸೋದರ ಸಹ್ಲಾದನ ಮಗ ಪಂಚಜನನೆ ಇರಬೇಕು]. ಅನಂತರ ಕೃಷ್ಣ ಯಮಲೋಕಕ್ಕೆ ತೆರಳಿ ಬಾಲಕನನ್ನು ಬದುಕಿಸಿ ತಂದು ಗುರುವಿಗಿತ್ತ. ಸಾಂದೀಪನಿಗೆ ಮಗ ದೊರಕಿದ. ಕೃಷ್ಣನಿಗೆ ಶಂಖ ದೊರಕಿತು.

ಭಗವಂತನ ದಿವ್ಯಶಂಖ ಕಡಲಲ್ಲಿ, ಅಸುರನ ಒಡಲಲ್ಲಿ ಹೇಗೆ ಸೇರಿಕೊಂಡಿತು? ಕಥೆ ಇನ್ನೂ ಹಿಂದಕ್ಕೆ ಹೋಗುತ್ತದೆ. ಕೃಷ್ಣ ಅವತರಿಸಿದಾಗಲೆ ದೇವಕೀ–ವಸುದೇವರಿಗೆ ಶಂಖ–ಚಕ್ರಧಾರಿಯಾಗಿ ಕಾಣಿಸಿಕೊಂಡಿದ್ದ.

**ತಮದ್ಭುತಂ ಬಾಲಕಮಂಬುಜೇಕ್ಷಣಂ ।**
**ಚತುರ್ಭುಜಂ ಶಂಖಗದಾದ್ಯುದಾಯುಧಮ್ ॥**

ಭಗವಂತನ ಕೈಯಲ್ಲಿದ್ದ ಆ ಶಂಖವೆ ಕೃಷ್ಣನ ಮಹಿಮಾತಿಶಯದ ಆವಿಷ್ಕಾರಕ್ಕಾಗಿ ಈ ಕಡಲಲ್ಲಿ, ಪಂಚಜನಾಸುರನ ಒಡಲಲ್ಲಿ ಸೇರಿ ಕೃಷ್ಣನ ಬರವಿಗಾಗಿ ಅಸುರನ ಸಂಹಾರಕ್ಕಾಗಿ ಕಾದಿತ್ತು–ಎಂದು ಶಾಸ್ತ್ರಕಾರರ ಅಭಿಪ್ರಾಯ.

ಕ್ಷೀರಸ್ವಾಮಿಯೆಂಬ ವೈಯಾಕರಣನ ಪ್ರಕಾರ '**ಪಂಚಜನ**' ಎಂದರೆ ಪಾತಾಳ. ಕ್ರಿಷ್ಣನಿಗೆ ಪಾತಾಳದಲ್ಲಿ ದೊರಕಿದ್ದರಿಂದ ಈ ಶಂಖಕ್ಕೆ ಪಾಂಚಜನ್ಯ ಎಂಬ ಹೆಸರು ಬಂತು.

ವಾಸ್ತವವಾಗಿ ಕೃಷ್ಣಾವತಾರದ ಮೊದಲೂ ಆ ಶಂಖ ಪಾಂಚಜನ್ಯವೇ ಆಗಿತ್ತು. ಪಂಚಜನರು ಎಂದರೆ ಪಂಚಜ್ಞಾನೇಂದ್ರಿಯಗಳು ಎಂದು ಉಪನಿಷತ್ತುಗಳು ಹೇಳುತ್ತವೆ : "**ಯಸ್ಮಿನ್ ಪಂಚ ಪಂಚಜನಾಃ**". ಅವುಗಳಲ್ಲಿ

ಸನ್ನಿಹಿತನಾದ ಪಂಚರೂಪಿ ಭಗವಂತನೆ ನಿಜವಾದ ಪಂಚಜನ. ಅವನ ಶಂಖವೆಂದೆ ಇದು ಪಾಂಚಜನ್ಯ. [ಪಂಚಜನ=ಪಂಚೇಂದ್ರಿಯ ನಿಯಾಮಕನಾದ ಭಗವಂತ : ಹೃಷೀಕೇಶ. ಹೃಷಿಕ=ಇಂದ್ರಿಯಗಳ, ಈಶ=ಸ್ವಾಮಿ. ಅದರಿಂದ ಹೃಷೀಕೇಶ ಪಾಂಚಜನ್ಯವನ್ನೂದಿದ ಎನ್ನುವುದು ಎಂಥ ಅರ್ಥಪೂರ್ಣವಾದ ಉದ್ಗಾರ– ಅಲ್ಲವೇ?]

ಪಾಂಚಜನ್ಯದ ಇನ್ನೊಂದು ಮುಖವನ್ನು ನೋಡೋಣ. ಈ ಪಾಂಚಜನ್ಯ ವೇದಾತ್ಮಕ, ವೇದಾಭಿಮಾನಿನಿಯಾದ ಲಕ್ಷ್ಮಿಯ ಸ್ವರೂಪ ಎಂದು ಶಾಸ್ತ್ರಕಾರರ ಮತ :

**ಪೂರ್ವಂ ಹರೇಶ್ಚಕ್ರಮಭೂದ್ಧಿ ದುರ್ಗಾ ಸಮಃಸ್ಥಿತಾ ಶ್ರೀರಿತಿ ಯಾಂ ವದಂತಿ ।**
**ಸತ್ವಾತ್ಮಿಕಾ ಶಂಖಮಥೋ ರಜಃಸ್ಥಾ ಭೂರ್ನಾಮಿಕಾ ಪದ್ಮಭೂದ್ಧ ರೇರ್ಹಿ ॥**
**(ಮಹಾಭಾರತ ತಾತ್ಪರ್ಯ ನಿರ್ಣಯ : ೩.೭೩)**

[ತಮೋಭಿಮಾನಿನಿಯಾದ ದುರ್ಗೆಯೇ ಹರಿಯ ಚಕ್ರ. ರಜೋಭಿಮಾನಿನಿಯಾದ ಭೂದೇವಿ ಪದ್ಮ. ಸತ್ವಾಭಿಮಾನಿನಿಯಾದ ಶ್ರೀದೇವಿಯೆ ಶಂಖ].

ಪ್ರಸಿದ್ಧವಾದ ನಾಲ್ಕು ವೇದಗಳು ಮತ್ತು ಇತಿಹಾಸ ಪುರಾಣಗಳು ಐದನೆಯ ವೇದ– **"ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ"**. ಜ್ಞಾನಜನಕಗಳಾದ ಈ ಪಂಚವೇದಗಳೇ ಪಂಚಜನಗಳು. ಅಂಥ ವೇದಾತ್ಮಕ ಲಕ್ಷ್ಮೀ ಸ್ವರೂಪವಾದ್ದರಿಂದಲೇ ಈ ಶಂಖ ಪಾಂಚಜನ್ಯ. ಹೀಗೆ ಮೂಲತಃ ಈ ಶಂಖ ಲಕ್ಷ್ಮೀಸ್ವರೂಪ. ಅನಂತರ ಕಾಮಪುತ್ರನಾದ ಅನಿರುದ್ಧನಿಂದ ಅಭಿಮನ್ಯಮಾನ.

ಪಂಚಜನ ಎಂದರೆ ಪಂಚಭೂತಗಳಿಂದ ಜನಿಸಿದ ಈ ವಿಶ್ವ. ಅದಕ್ಕೆ ಮೂಲಭೂತವಾದ ಪ್ರಕೃತಿ ತತ್ವವೆ ಪಾಂಚಜನ್ಯ. ಅದಕ್ಕೆಂದೆ ಪ್ರಕೃತಿಸ್ವರೂಪವಾದ ಶಂಖವೂ ಪಾಂಚಜನ್ಯ.

ಪಂಚರೂಪನಾದ ನಾರಾಯಣನಿಂದ ಜನಿಸಿದ ಪ್ರದ್ಯುಮ್ನನೆ ಪಂಚಜನ. ಅವನ ಪುತ್ರ ಅನಿರುದ್ಧ ಪಾಂಚಜನ್ಯ. ಅದರಿಂದ ಅನಿರುದ್ಧನಿಂದ ಅಭಿಮನ್ಯಮಾನವಾದ ಶಂಖವೂ ಪಾಂಚಜನ್ಯ.

ಮೂಲತಃ ಪಾಂಚಜನ್ಯವೆ ಆಗಿದ್ದ ಈ ಶಂಖದ ಹೆಸರಿಗೆ ಕೃಷ್ಣಾವತಾರದಲ್ಲಿ ನಡೆದ ಪಂಚಜನಸಂಹಾರದಿಂದ ಇನ್ನೊಂದು ಹೊಸ ನಿರ್ವಚನ ಸೇರಿಕೊಂಡಿತು– ಅಷ್ಟೆ. ಚತುರ್ಮೂರ್ತಿಯಾಗಿ ವಾಸುದೇವನಾಗಿದ್ದ ಭಗವಂತ ವಸುದೇವಪುತ್ರನಾಗಿ ಅವತರಿಸಿ ಮತ್ತೊಮ್ಮೆ ವಾಸುದೇವನಾದಂತೆ! ಅದಕ್ಕೆಂದೆ ಇದು ದಿವ್ಯ ಶಂಖ.

ಹೀಗೆ ವೇದಾತ್ಮಕವಾದ, ಪ್ರಕೃತಿಸ್ವರೂಪವಾದ ಕೃಷ್ಣನ ಈ ಶಂಖದ ಮಹಿಮೆಯನ್ನು ವಿಷ್ಣುಪುರಾಣ ಹೀಗೆ ವರ್ಣಿಸುತ್ತದೆ :

**ಯಸ್ಯ ನಾದೇನ ದೈತ್ಯಾನಾಂ ಬಲಹಾನಿರಜಾಯತ ।**
**ದೇವಾನಾಂ ವವೃಧೇ ತೇಜೋ ಯಾತ್ಯಧರ್ಮಶ್ಚ ಸಂಕ್ಷಯಮ್ ॥ [೫–೨೧–೨೯]**

[ಈ ಶಂಖದ ನಾದದಿಂದ ದೈತ್ಯರ ಬಲ ಕುಗ್ಗುತ್ತದೆ. ದೇವತೆಗಳ ತೇಜ ಹಿಗ್ಗುತ್ತದೆ. ಅಧರ್ಮ ನಿರ್ನಾಮವಾಗುತ್ತದೆ.]

ಹಾಗಾದರೆ ಈ ಶಂಖ ನಾದದಿಂದ ದೈತ್ಯಪಕ್ಷೀಯರಾದ ಕೌರವರ ಸೋಲಿಗೆ, ದೇವ ಪಕ್ಷೀಯರಾದ ಪಾಂಡವರ ವಿಜಯಕ್ಕೆ ನಾಂದಿ ಹಾಡಿದಂತಾಯಿತು. **"ಯತೋ ಧರ್ಮಸ್ತತೋ ಜಯಃ"** ಎಂಬ ಮಾತಿನ ಹರಿಕಾರವಾಯಿತು.

ಅದನ್ನು ನುಡಿಸಿದವನೂ ಹೃಷೀಕೇಶ : ಇಂದ್ರಿಯಗಳ ನಿಯಾಮಕನಾದ ಪ್ರಭು. ಶತ್ರುಗಳ ಬಗೆಯಲ್ಲಿ ಪುಕ್ಕು ತುಂಬಿದ; ಪಾಂಡವರ ಬಗೆಯಲ್ಲಿ ವಿಜಯದ ಭರವಸೆ ತುಂಬಿದ. ಮೊದಲೇ ವಿಷಣ್ಣನಾಗಿದ್ದ ದುರ್ಯೋಧನ ಇನ್ನಷ್ಟು ಕಂಗೆಟ್ಟ. ಕೌರವ ಸೇನೆ ದಿಕ್ಕುಗೆಟ್ಟಿತು. ಪಾಂಡವಸೇನೆ ವಿಜಯದ ಆತ್ಮವಿಶ್ವಾಸದಿಂದ ಎದೆಯುಬ್ಬಿ ನಿಂತಿತು. ಊದಿದ್ದು ಪಾಂಚಜನ್ಯ; ಊದಿದವನು ಹೃಷೀಕೇಶ ಎಂದ ಮೇಲೆ ಶತ್ರುಗಳ ಪಾಡು ಹೇಳಬೇಕಾದ್ದೇ ಇಲ್ಲ. ಹಾವಾಡಿಗನ ಪುಂಗಿಗೆ ಹೆಡೆಯರಳಿಸಿ ತೊನೆದಾಡುವ ಹಾವುಗಳು!

ಇನ್ನು ಅರ್ಜುನನ ದೇವದತ್ತ ಶಂಖದ ಸಂಗತಿಗೆ ಬರೋಣ :

ಪಾಂಡವರು ವನವಾಸದಲ್ಲಿದ್ದಾಗ ಅರ್ಜುನ ಪಾಶುಪತಾಸ್ತ್ರಕ್ಕಾಗಿ ಶಿವನನ್ನು ಕುರಿತು ತಪಸ್ಸು ಮಾಡಿದ. ತಪಸ್ಸಿಗೆ ಒಲಿದ ಶಿವನಿಂದ ವರಪಡೆದ ಅರ್ಜುನನ್ನು ಇಂದ್ರ ದೇವಲೋಕಕ್ಕೆ ಕರೆದೊಯ್ದು. ಐದು ವರ್ಷಗಳ ಕಾಲ ಅರ್ಜುನ ದೇವಲೋಕದಲ್ಲಿದ್ದು ಮತ್ತಷ್ಟು ದಿವ್ಯಾಸ್ತ್ರಗಳನ್ನು ಪಡೆದ. ಅಲ್ಲಿಂದ ತೆರಳುವ ಸಂದರ್ಭದಲ್ಲಿ ನಿವಾತಕವಚರೆಂಬ ದಾನವರ ಸಂಹಾರಕ್ಕಾಗಿ ಇಂದ್ರ ಅರ್ಜುನನ್ನು ಕೇಳಿಕೊಳ್ಳುತ್ತಾನೆ. ಯುದ್ಧಕ್ಕೆ ಹೊರಟ ಅರ್ಜುನನಿಗೆ ದೇವತೆಗಳು ದೇವಲೋಕದ ಶಂಖವನ್ನು ಉಡುಗರೆಯಿತ್ತು ಹರಸಿ ಕಳಿಸುತ್ತಾರೆ. ಹೀಗೆ ಅರ್ಜುನನ ಶಂಖ ದೇವಲೋಕದಿಂದ ಬಂದದ್ದು. ದೇವತೆಗಳಿಂದ ದತ್ತವಾದದ್ದು. ಅದಕ್ಕೆಂದೆ ಅದು 'ದೇವದತ್ತ'. ಅದಕ್ಕೆಂದೆ ಅದು ದಿವ್ಯ.

ಈ ಮಾತು ಮಹಾಭಾರತದಲ್ಲಿ ಬಂದಿದೆ :

**ಅಯಂ ಸ ಶಂಖಪ್ರವರೋ ಯೇನ ಜೇತಾಸಿ ದಾನವಾನ್ ।**
**ಅನೇನ ವಿಜಿತಾ ಲೋಕಾಃ ಶಕ್ರೇಣಾಪಿ ಮಹಾತ್ಮನಾ ॥**
**ಪ್ರದೀಯಮಾನಂ ದೇವೈಸ್ತಂ ದೇವದತ್ತಂ ಜಲೋದ್ಭವಮ್ ।**
**ಪ್ರತ್ಯಗೃಣ್ಣಂ ಜಯಾಯ್ಯೆನಂ ಸ್ತೂಯಮಾನಸ್ತದಾಮರೈಃ ॥ [ವನಪರ್ವ : ೧೬೮-೮೪-೫]**

[ಅರ್ಜುನ : "ಇದು ಶ್ರೇಷ್ಠವಾದ ಶಂಖ ಇದರ ನಾದದಿಂದಲೆ ನೀನು ನಿವಾತಕವಚ ದಾನವರನ್ನು ಗೆದೆಯಬಲ್ಲೆ. ಇಂದ್ರ ಕೂಡ ಈ ಶಂಖನಾದದಿಂದಲೆ ಲೋಕ ವಿಜಯೀಯಾದ"-ಎಂದು ಹರಸಿ ದೇವತೆಗಳು ಆ ಶಂಖವನ್ನು ನನಗಿತ್ತರು. ಶತ್ರು ವಿಜಯಕ್ಕಾಗಿ ನನ್ನನ್ನು ಹರಸಿ ಹೊಗಳುತ್ತಿರುವ ಅವರು ನೀಡಿದ ಆ ಶಂಖವನ್ನು ನಾನು ಸ್ವೀಕರಿಸಿದೆ.]

**ಶಂಖಂ ದದುಸ್ತಸ್ಯ ದೇವಾ ದೇವದತ್ತಃ ಸ ಶಂಖರಾಟ್ । [ಮ.ಭಾ.ತಾ.ನಿ : ೨೨-೩೦೭]**

[ದೇವತೆಗಳು ಆ ಶಂಖವನ್ನು ಅರ್ಜುನನಿಗೆ ನೀಡಿದರು. ಅದಕ್ಕೆಂದೆ ಆ ದಿವ್ಯಶಂಖ ದೇವದತ್ತವೆಂದು ಖ್ಯಾತವಾಯಿತು.]

ಇಲ್ಲಿ ಅರ್ಜುನನ್ನು ಧನಂಜಯ ಎಂದು ಕರೆಯಲಾಗಿದೆ: "**ದೇವದತ್ತಂ ಧನಂಜಯಃ**" ಧನಂಜಯ ಎಂದರೆ ಸಹಜಾರ್ಥದಲ್ಲಿ ಶತ್ರುಗಳ ಸಂಪತ್ತನ್ನು ಸೂರೆಗೈಯಬಲ್ಲ ಮಹಾವೀರ. ಮಾತು ಇಲ್ಲಿಗೆ ಮುಗಿಯುವುದಿಲ್ಲ. ನಿಜವಾದ ಧನ ದೈವೀಸಂಪತ್ತು. ವಿದ್ಯಾಧನ. "**ವಿದ್ಯಾಧನಂ ಸರ್ವಧನಪ್ರಧಾನಮ್**". ಅರ್ಜುನ ಈ ದೈವೀಸಂಪತ್ತನ್ನು ಗೆದ್ದವನು. ದೇವಲೋಕದಲ್ಲಿದ್ದು ದಿವ್ಯಾಸ್ತ್ರಗಳನ್ನು ತಿಳಿದುಕೊಂಡವನು. ಅದರ ಫಲವಾಗಿಯೆ ತಾನೆ '**ದೇವದತ್ತ**' ಅವನಿಗೆ ದೊರಕಿದ್ದು.

ಅಧ್ಯಾತ್ಮ ವಿದ್ಯೆಯಲ್ಲು ಅವನು ಮಹಾಜ್ಞಾನಿ. ಅಷ್ಟೆ ಅಲ್ಲ. ದೈವೀಸಂಪತ್ತು ಅವನ ಹುಟ್ಟುಗುಣ : "ಮಾ ಶುಚ ಸಂಪದಂ ದೈವೀಮಭಿಜಾತೋಽಸಿ ಪಾಂಡವ". ಹೀಗೆ ದೈವೀಸಂಪತ್ತನ್ನು ಗೆದ್ದ ಅರ್ಜುನ ದೇವದತ್ತವಾದ ಶಂಖವನ್ನು ಊದಿದ.

ದೇವಸ್ವಭಾವದ ಅರ್ಜುನ, ಖಾಂಡವ ದಹನ ಕಾಲದಲ್ಲಿ ಅಗ್ನಿದೇವದತ್ತವಾದ ರಥ; ಗಾಂಡೀವ ಧನುಸ್ಸು; ಅಕ್ಷಯವಾದ ಎರಡು ಬತ್ತಳಿಕೆಗಳು; ಮೇಲೆ ವಾನರಧಜ; ಕೈಯಲ್ಲಿ ಮತ್ತೆ ದೇವದತ್ತವಾದ ಶಂಖ. ಹೀಗೆ ಧನಂಜಯ ದೇವದತ್ತದ ಭೋಂಕಾರ ಮತ್ತೊಮ್ಮೆ ಎದುರಾಳಿಗಳ ಎದೆ ನಡುಗಿಸಿತು; ಕಂಗೆಡಿಸಿತು.

ಈ ಭಾಗವನ್ನು ಆಚಾರ್ಯ ರಾಮಾನುಜರು ಹೀಗೆ ವ್ಯಾಖ್ಯಾನಿಸಿದ್ದಾರೆ :

ತತಃ = ಅನಂತರ, ಕೌರವಸೇನೆಯ ಆ ಘೋಷವನ್ನಾಲಿಸಿ, ಮೂರು ಲೋಕಗಳನ್ನೂ ಗೆದೆಯಬಲ್ಲಂಥ ಮಹತ್ತಾದ ರಥದಲ್ಲಿ ಕುಳಿತಿರುವ, ಎಲ್ಲ ಹಿರಿಶಕ್ತಿಗಳಿಗೂ ಹಿರಿಯನಾದ ಪಾರ್ಥಸಾರಥಿ ಶ್ರೀಕ್ರಿಷ್ಣ ಮತ್ತು ರಥಿಕನಾದ ಪಾಂಡುನಂದನ ಅರ್ಜುನ ಇಬ್ಬರೂ ತ್ರೈಲೋಕ್ಯವನ್ನೆ ಕಂಗೆಡಿಸಬಲ್ಲ ಶ್ರೀಮಂತವಾದ ಪಾಂಚಜನ್ಯ ಮತ್ತು ದೇವದತ್ತ ಎಂಬ ದಿವ್ಯ ಶಂಖಗಳನ್ನು ಊದಿದರು.

**ಲೇಖಾಂಕ: ೨೧**

# ಭಗವದ್‌ಗೀತೆ

**–ಬನ್ನಂಜೆ ಗೋವಿಂದಾಚಾರ್ಯ**

ನಾರಾಯಣ ಶಂಖ ಊದಿದ. ನರ ಶಂಖ ಊದಿದ. ಅನಂತರ ನರೋತ್ತಮನಾದ ವಾಯುತನಯ ಭೀಮಸೇನ ಕೂಡ ಶಂಖ ಊದಿದ ಎನ್ನುತ್ತದೆ ಉತ್ತರಾರ್ಧ :

**ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ॥**

ಭೀಮಸೇನನ ಶಂಖ ಮಹಾಶಂಖ. ಗಾತ್ರದಲ್ಲು, ಗುಣದಲ್ಲು ಹಿರಿದಾದ ಶಂಖ, ಶತ್ರುಗಳನ್ನು ಕಂಗೆಡಿಸಬಲ್ಲ ಮಹಾನಾದದ ಶಂಖ. ತನ್ನ ಪಕ್ಷೀಯರಿಗೆ ಆತ್ಮವಿಶ್ವಾಸ ತುಂಬಬಲ್ಲ ಗಂಭೀರನಾದದ ಶಂಖ. ಅವನ ಭೀಮಬಲಕ್ಕೆ ತಕ್ಕುದಾದ ಶಂಖ. ಅಂಥ ಬೃಹದ್‌ಗಾತ್ರದ ಜಾತಿಶಂಖವನ್ನು ಹುಡುಕಿ ಪುಂಡ್ರ ದೇಶದಿಂದ ತರಿಸಿದ ಶಂಖ. ಅದಕೆಂದೆ ಅದರ ಹೆಸರು ಪೌಂಡ್ರ [ಕಾಶಿ ಮತ್ತು ವಂಗ ದೇಶಗಳ ನಡುವೆ ಪುಂಡ್ರ ದೇಶವಿತ್ತು].

ಶಂಖ ಮಾತ್ರ ಮಹತ್ತಾದುದಲ್ಲ: ಅದನ್ನು ಊದಿದವನೂ ಅಂಥವನೆ : '**ಭೀಮಕರ್ಮಾ**'.

ಭೀಮ ಶಬ್ದಕ್ಕೆ ಸಂಕೃತದಲ್ಲಿ ಸುಂದರವಾದ ಶ್ಲೇಷ ಉಂಟು. ಭಯ ಬರಿಸುವವನು ಭೀಮ [**ಬಿಭೇತ್ಯಸ್ಮಾದಿತಿ ಭೀಮ**]. ಭಯಹರಿಸಿವವನು ಭೀಮ [**ಭೀ ಮಾ ಯಸ್ಮಾತ್ ಸಃ**]. ಭೀಮಸೇನ ಎರುಡು ಅರ್ಥದಲ್ಲಿ ಭೀಮಕರ್ಮ. ಅವನ ಒಂದೊಂದು ನಡೆಯೂ ಶತ್ರುಗಳ ಎದೆಗೆಡಿಸುತ್ತಿತ್ತು. ಆದರೆ ಪಾಂಡವ ಪಕ್ಷೀಯರಿಗೆ "**ಭೀ ಮಾ**" ನಾನು ನಿಮ್ಮ ಜತೆ ಇರುವಾಗ ಏತರ ಭಯ–ಎಂದು ಧೈರ್ಯ ನೀಡಿ ಹುರಿದುಂಬಿಸುತ್ತಿತ್ತು. ಅವನಂತೆಯೆ ಆವನ ಶಂಖಧ್ವನಿ : ಪರಕೀಯರಿಗೆ ಭಯಂಕರ. ಸ್ವಕೀಯರಿಗೆ ಅಭಯಕರ.

ಹೀಗೆ ಭೀಮ ಶಬ್ದಕ್ಕೆ ಎರಡು ಮುಖಗಳಿದ್ದರೂ ಇಲ್ಲಿ ಒತ್ತಿ ಹೇಳಬೇಕಾದ್ದು ಭಯದ ಮುಖವೆ. ಅವನ ನಡೆ, ಅವನ ಶಂಖನಾದ ಎಲ್ಲವೂ ಕೌರವರಿಗೆ ಭಯಾನಕವಾಗಿತ್ತು– ಎಂದು ದೃತರಾಷ್ಟ್ರನಿಗೆ ಮನವರಿಕೆ ಮಡುವುದು ಸಂಜಯನ ಉದ್ದೇಶವಲ್ಲವೇ? '**ಭೀಮಕರ್ಮಾ**' ಎಂದಾಗ ಧೃತರಾಷ್ಟ್ರನ ಕಣ್ಮುಂದೆ ಎರಡು ರೂಪಗಳು ಮೂಡಿ ಬಂದಿರಬೇಕು : ಒಂದೆಡೆ ಭಯಂಕರನಾಗಿ ನಿಂತ ಭೀಮ. ಇನೊಂದೆಡೆ ಭೀಮನ ಗದಾಗಾತಕ್ಕಲ್ಲ–ಶಂಖನಾದಕ್ಕೆಯೆ ಕಳೆಗುಂದಿದ, ಎದೆಗುಂದಿದ ಪೆಚ್ಚುಮೋರೆಯ ದುರ್ಯೋಧನ!

ಭೀಮಸೇನನಿಗೆ ಇಲ್ಲಿ ಬಂದ ಹೆಸರು : '**ವೃಕೋದರಃ**'. ಈ ಪದವೂ ತುಂಬ ಅರ್ಥದ ಆಳಕ್ಕೆ ನಮ್ಮನ್ನು ಕೊಂಡೊಯ್ಯುತ್ತದೆ. ಮೇಲುನೋಟಕ್ಕೆ ಇದರ ಅರ್ಥ ತೀರ ಸರಳ. ವೃಕ ಎಂದರೆ ತೋಳ. ತೋಳದಂತೆ ಚುರುಕಾದ, ಲಘುವಾದ ಹೊಟ್ಟೆ ಉಳ್ಳವನು ವೃಕೋದರ. ಭೀಮಕಾಯನಾದರೂ ಬೊಜ್ಜು ಬೆಳೆಯದ, ತೆಳುವಾದ ಹೊಟ್ಟೆ ಇರುವುದು ಆರೋಗ್ಯದ ಲಕ್ಷಣವೂ ಹೌದು; ಸೌಂದರ್ಯದ ಲಕ್ಷಣವು ಹೌದು. "**ಮೇದಶ್ಛೇದಕೃಶೋದರಂ ಲಘು ಭಯತ್ಯುತ್ಥಾನಯೋಗ್ಯಂ ವಪುಃ**" ಎಂಬ ಕಾಳಿದಾಸನ ಸೂಕ್ತಿ ಇಲ್ಲಿ ನೆನಪಿಸಿಕೊಳ್ಳಬೇಕಾದಂಥದು.

ಆದರೆ ಹೊರನೋಟದ ಅರ್ಥದಲ್ಲೆ ಈ ಶಬ್ದ ವಿಶ್ರಾಂತವಾಗುವುದಿಲ್ಲ. ಅರ್ಜುನನನಿಗೆ ಸ್ವಲ್ಪ ಜೋಳು ಹೊಟ್ಟೆ ಇತ್ತು(ಉದರಸ್ಯ ಕಿಂಚಿದಾದಿಕ್ಯಂ) ಎನ್ನುವ ಹಿನ್ನಲೆಯಲ್ಲಿ ಭೀಮಸೇನನಿಗೆ ಈ ಹೆಸರು ಅರ್ಥಪೂರ್ಣವಾದರೂ ಅದಕ್ಕಿಂತ ಮಿಗಿಲಾದ ಅರ್ಥಧ್ವನಿ ಈ ಪದದಲ್ಲಿದೆ.

'**ವೃಕ**' ಎಂದರೆ ಬಂದದ್ದನ್ನೆಲ್ಲ ಕಬಳಿಸಿ ಕರಗಿಸಬಲ್ಲ ವಿಶೇಷಶಕ್ತಿ ಉಳ್ಳ ಜಠರಾಗ್ನಿ.

[**ವರ್ಕತೆ ಇತಿ ವೃಕಃ । ವೃಕ ಆದಾನೆ**]. ಅಂಥ, ಎಲ್ಲವನ್ನೂ ಜೀರ್ಣಿಸಬಲ್ಲ ವೃಕನಾಮಕ ಅಗ್ನಿ ಉದರದಲ್ಲಿರುವವನು ವೃಕೋದರ. [**ವೃಕ ಉದರೇ ಯಸ್ಯ ಸಃ**]. ಬ್ರಹ್ಮದೇವನಿಗೆ **'ವೃಕೋದರ'** ಎನ್ನುವ ಹೆಸರಿದೆ. ವಾಯುದೇವನಿಗೆ ಕೂಡ. ಪ್ರಳಯಕಾಲದಲ್ಲಿ ಇಡಿಯ ವಿಶ್ವವನ್ನು ಸುಟ್ಟು ಸಂಹರಿಸಬಲ್ಲಷ್ಟು ತೀಕ್ಷ್ಣವಾದ ಜಠರಾಗ್ನಿ ಅವರದು ಎನ್ನುವುದಕ್ಕಾಗಿ ಅವರಿಗೆ ಆ ಹೆಸರು.

ವಾಯುನಂದನ ಭೀಮಸೇನನ ಉದರದಲ್ಲು ಇಂಥ ಅಗ್ನಿ ಇತ್ತು ಎಂದು ಶಾಸ್ತ್ರಗಳು ಹೇಳುತ್ತವೆ. ಮತ್ಸ್ಯಪುರಾಣದಲ್ಲಿ ಈ ಮಾತು ಸ್ಫುಟವಾಗಿ ಬಂದಿದೆ :

**ಯಸ್ಯ ತೀಕ್ಷ್ಣೋ ವೃಕೋ ನಾಮ ಜಠರೇ ಹವ್ಯವಾಹನಃ ।**
**ಮಯಾ ದತ್ತಃ ಸ ಧರ್ಮಾತ್ಮಾ ತೇನ ಚಾಸೌ ವೃಕೋದರಃ ॥**

ತೀಕ್ಷ್ಣವಾದ ವೃಕಾಗ್ನಿ ಭೀಮನ ಉದರದಲ್ಲಿತ್ತೆಂದೆ ಏಕಚಕ್ರಾನಗರಿಯಲ್ಲಿ ಭಿಕ್ಷೆ ಬೇಡಿ ತಂದದ್ದರಲ್ಲಿ ಅರ್ಧವನ್ನು ಭೀಮನಿಗೆ ಕೊಡಲಾಗುತ್ತಿತ್ತು. ಬಕನನ್ನು ಕೊಂದು ಬಂಡಿ ಅನ್ನ ಉಂಡು ಭೀಮ ಅದನ್ನು ಸ್ಫುಟ ಪಡಿಸಿದ. ಈ ವೃಕಾಗ್ನಿಯ ತೀಕ್ಷ್ಣತೆ ಇಚಿಥದು : ಅದು ಏನನ್ನು ಬೇಕಾದರೂ ಜೀರ್ಣಿಸಬಲ್ಲದು. ಆದರೆ–ತಿನ್ನದಿದ್ದರೆ ಹಸಿವಿನಿಂದ ತೊಳಲಾದಿಸದು. ಏಕೆಂದರೆ ಪ್ರಳಯ ಕಾಲದಲ್ಲಿ ಜಗತ್ತನೇ ಜೀರ್ಣಿಸಬಲ್ಲ **"ಪ್ರಾಣಾಗ್ನಿ"** ಇದು!

[ಆಚಾರ್ಯ ಮಧ್ವರ ಜೀವನಚರಿತ್ರೆಯಲ್ಲು ಇಂಥ ಒಂದು ಉಲ್ಲೇಖ ಬರುತ್ತದೆ. ಒಮ್ಮೆ ಗುರು ಅಚ್ಯುತಪ್ರಜ್ಞರೊಡನೆ ಆಚಾರ್ಯಮಧ್ವರು ದಕ್ಷಿಣಕ್ಕೆ ಯಾತ್ರೆ ಹೊರಟರು. ದಾರಿಯಲ್ಲಿ(ಕಾಸರಗೋಡಿನ) ವಿಷ್ಣುಮಂಗಲ ದೇವಾಲಯದಲ್ಲಿ ತಂಗಿದರು. ಆಚಾರ್ಯರಿಗೆ ಇನ್ನೂ ಇಪ್ಪತ್ತರ ಹರಯ. ಆದರೆ ಅವರ ದೈವೀಶಕ್ತಿಯ ಬಗ್ಗೆ ಆಗಲೆ ಎಲ್ಲಡೆ ಸುದ್ದಿ ಹಬ್ಬಿತ್ತು. ಜನರಲ್ಲಿ ಕುತೂಹಲ ಕೆರಳಿಸಿತ್ತು. ಅಂದು ವಿಷ್ಣುಮಂಗಲದಲ್ಲಿ ಭಿಕ್ಷೆ ನೀಡಿದ ಗೃಹಸ್ಥನೂ ಇಂಥ ಸುದ್ದಿ ಕೇಳಿದ್ದ. ಇದನ್ನು ಕಣ್ಣಾರೆ ಕಣಬೇಕೆಂಬ ಕುತೂಹಲ. ಅದಕ್ಕೆಂದೆ ಅವನು ಆಚಾರ್ಯರ ಭಿಕ್ಷೆಯ ಕೊನೆಯಲ್ಲಿ ಬಾಳೆಹಣ್ಣುಗಳ ರಾಶಿಯನ್ನೆ ಅವರ ಮುಂದಿರಿಸಿದ. ಆಚಾರ್ಯರು ಆದನ್ನು ಅನಾಯಾಸವಾಗಿ ತಿಂದು ಮುಗಿಸಿದರು. ಇದನ್ನು ಕಂಡು ವಿಸ್ಮಿತರಾದ ಗುರು ಅಚ್ಯುತಪ್ರಜ್ಞರು "ಸಣ್ಣಹೊಟ್ಟೆ ಇಷ್ಟೊಂದನ್ನು ಜೀರ್ಣಿಸಿಕೊಳ್ಳುವುದು ಹೇಗೆ ಸಾಧ್ಯ?" ಎಂದು ಆಚಾರ್ಯರನ್ನು ಕೇಳಿದರು. ಆಚಾರ್ಯರು ನಗುತ್ತಲೇ ಉತ್ತರಿಸಿದರು. "ನನ್ನ ಉದರದಲ್ಲಿ ಅಂಗುಷ್ಠಗಾತ್ರದ ಅಗ್ನಿ ಪ್ರಜ್ವಲಿಸುತ್ತಿದೆ. ಅದು ಇಡಿಯ ವಿಶ್ವವನ್ನೇ ಜೀರ್ಣಿಸಿಕೊಳ್ಳಬಲ್ಲುದು. ಆದರೂ ನನ್ನನ್ನು ಎಂದೂ ಹಸಿವಿನಿಂದ ಕಾಡಿಸದು" **(ಮ.ವಿ. ೫.೩೦–೩೩)**. ಆಚಾರ್ಯರು ಪ್ರಾಣತತ್ವಕ್ಕೆ ಸಂಬಂಧಿಸಿದ ವೃಕಾಗ್ನಿಯ ಕುರಿತೇ ಈ ಮಾತನ್ನಾಡಿದ್ದರು ಎನ್ನುವುದು ಸ್ಪಷ್ಟ].

ಶಂಖ ಊದಿದವನು ವೃಕೋದರ. ಪಳಯಂಕರವಾದ ಅಗ್ನಿಯನ್ನು ಜಠರದಲ್ಲಿ ಹೊತ್ತ ವಾಯುನಂದನ. ಇದು ಈ ಶಂಖನಾದ, ಮುಂದೆ ನಡೆಯಲಿರುವ ಯುಗಾಂತಕ್ಕೆ ಕಾರಣವಾದ ಮಾರಣಹೋಮದ ಸಂಕೇತ ಎನ್ನುವುದನ್ನು ಧ್ವನಿಸುತ್ತದೆ. ಭೀಮಸೇನನ ಕೋಪಾಗ್ನಿಗೆ ಲಕ್ಷಲಕ್ಷ ವೀರರು ಬಲಿಯಾಗಲಿದ್ದಾರೆ; ಕುರುಕ್ಷೇತ್ರದಲ್ಲಿ ಒಂದು ಪುಟ್ಟ ಪ್ರಳಯವೆ ನಡೆಯಲಿದೆ. ಏಕೆಂದರೆ ಆ ಆಗ್ನಿ ಈಗ ಅಶಾಂತಕವಾಗಿ ಬುಗಿಲೆದ್ದಿದೆ. ಭೀಮಸೇನ ತನ್ನೆಲ್ಲ ತಾಳ್ಮೆಯನ್ನು ಕಳೆದುಕೊಂಡು **'ಭೀಮಕರ್ಮ'**ನಾಗಿ ರಣರಂಗದಲ್ಲಿ ನಿಂತಿದ್ದಾನೆ. ಈಗ ದುರ್ಯೋಧನನ ಬೆಂಬಲಿಗರ ಎದೆಗೆಡಿಸಿದ, ತಲೆಗೆಡಿಸಿದ ಈ ಶಂಖನಾದದಿಂದ ಮುಂದೆ ಅವರ ಎದೆಯ ನೆತ್ತರು ಬಸಿಯಲಿದೆ– ತೆಲೆ ಉರುಳಲಿದೆ. ಸಂಜಯನ ಪದಪುಂಜ ಧೃತರಾಷ್ಟ್ರನ ಬಗೆಯಲ್ಲಿ ಇಷ್ಟು ಭಾವನೆಗಳನ್ನು ಮೂಡಿಸಿ ತನ್ನ ರಾಜಕೀಯ ನಿರ್ಧಾರದ ತಪ್ಪಿನ ಬಗ್ಗೆ ಅವನ ಅಂತರಾಳದಲ್ಲಿ ವಿಷಾದದ ಗೆರೆಯನ್ನು ಮೂಡಿಸಲು ಸಮರ್ಥವಾಗಿದೆ.

ಕುಂತಿಪುತ್ರರಲ್ಲಿ ಕಿರಿಯನಾದ ಅರ್ಜುನ ಮೊದಲು ಶಂಖನಾದ ಮಾಡಿದ. ಆಗ ಅವನಣ್ಣ ಭೀಮಸೇನ ಶಂಖನಾದ ಮಾಡಿದ. ಅನಂತರ ಇವರಿಬ್ಬರಿಗೂ ಅಣ್ಣನಾದ, ಹಿರಿಯಣ್ಣ ಧರ್ಮರಾಜನ ಸರದಿ :

**ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ ।**

ಧರ್ಮರಾಜನ ಶಂಖದ ಹೆಸರು **‘ಅನಂತ ವಿಜಯ’**. ಅವನು ಸಾಮಾನ್ಯ ಎಂದೂ ಯುದ್ಧಗಳಲ್ಲಿ ಭಾಗವಹಿಸಿದವನಲ್ಲ. ಅವನು ಮಹಾವೀರನಿದ್ದ. ಅದರೂ ಯುದ್ಧವನ್ನು ಪ್ರೀತಿಸುತ್ತಿರಲಿಲ್ಲ. ಏಕೆಂದರೆ ‘ನಾವು ಯುದ್ಧವನ್ನು ಪ್ರೀತಿಸಿದರೂ ಯುದ್ಧ ನಮ್ಮನ್ನು ಪ್ರೀತಿಸುವುದಿಲ್ಲ’ ಎಂದು ಅವನಿಗೆ ಚನ್ನಾಗಿ ತಿಳಿದಿತ್ತು. ತೀರ ಅನಿವಾರ್ಯವಾದ ಸಂದರ್ಭದಲ್ಲಿ ಕೂಡ ಯುದ್ಧದಲ್ಲಿ ಪಾಲುಗೊಂಡವರು ಭೀಮಾರ್ಜುನರು ಮಾತ್ರ. ಧರ್ಮರಾಜ ಎಂದೂ ಯುದ್ಧ ಮಾಡಿದವನಲ್ಲ. ಎಂದೂ ಯಾರನ್ನೂ ಸೋಲಿಸಿ ವಿಜಯವನ್ನು ಸಾರಿದವನಲ್ಲ. ಅಂಥ ಮೃದು ಹೃದಯ ಅವನದು. ಅದರೂ ಅವನು ತನ್ನ ಶಂಖವನ್ನು **‘ಅನಂತ ವಿಜಯ’** ಎಂದು ಕರೆದ.

ಇಲ್ಲಿ ಅವನ ಅಧ್ಯಾತ್ಮ ಮನೋವೃತ್ತಿ ಕೆಲಸ ಮಾಡಿದಂತಿದೆ. ಯುದ್ಧದಲ್ಲಿ ಸಾಧಿಸುವ ವಿಜಯಗಳಿಗೆಲ್ಲ ಒಂದು ಅಂತ ಇದೆ; ಒನ್ದು ಕೊನೆ ಇದೆ. ಯಾವ ವಿಜಯವು ಅನಂತವಲ್ಲ. ತಾವೇ ಜಗತ್ತನ್ನು ಗೆದ್ದ ಏಕವೀರರು ಅಂದುಕೊಂಡ ಚಕ್ರವರ್ತಿಗಳೆಲ್ಲ ಅಂತಕನ ಪಾಲಾದರು. ಅದಕ್ಕೆಂದೆ ಧರ್ಮರಾಜ ಇಂಥ ವಿಜಯದ ಬಗ್ಗೆ ಅಷ್ಟೊಂದು ಆಸಕ್ತನಾಗಿರಲಿಲ್ಲ. ಇಡಿಯ ಮಹಾಭರತದುದ್ದಕ್ಕೂ ಅವನ ವ್ಯಕ್ತಿತ್ವ ಹೀಗೆಯೇ ನಿರೂಪಿತವಾಗಿದೆ. ಅವನಿಗೆ ಯುಧದಲ್ಲಿ ಆಸಕ್ತಿ ಇರಲಿಲ್ಲ. ಶತ್ರುಗಳನ್ನು ಗೆದ್ದು ಸಾಮ್ರಾಟ್ ಆಗುವುದಕ್ಕೂ ಆಸಕ್ತಿ ಇರಲಿಲ್ಲ. ತಮ್ಮ ಹಕ್ಕಿನ ಪಾಲನ್ನು ಪಡೆಯುವುದಕ್ಕೂ ಅವನಿಗೆ ಅಷ್ಟೊಂದು ಆಸಕ್ತಿ ಇರಲಿಲ್ಲ. ಶ್ರೀಕೃಷ್ಣ, ವೇದವ್ಯಾಸರು, ದ್ರೌಪದಿ ಮತ್ತು ತಮ್ಮಂದಿರ ಒತ್ತಾಸೆಯಲ್ಲದಿದ್ದರೆ ಅವನು ಸರ್ವಸ್ವವನ್ನೂ ಕೌರವನಿಗೆ ಧಾರೆಯೆರದು ಸನ್ಯಾಸಿಯಾಗಿ ಬಿಡುತ್ತಿದ್ದ. ಅವನು ತನ್ನ ಶಂಖಕ್ಕೆ ಇಟ್ಟ ಹೆಸರು ಅವನ ಸ್ವಭಾವಕ್ಕೆ ಹಿಡಿದ ಕೈಗನ್ನಡಿಯಾಗಿದೆ.

ಅನಂತವಾದ ವಿಜಯ ಎಂದರೆ ರಾಜ್ಯವನ್ನು ಗೆದೆಯುವುದಲ್ಲ; ಸಂಸಾರವನ್ನೆ ಗೆದೆಯುವುದು. ಅನಂತನಾದ ಭಗವಂತನನ್ನೆ ಒಲಿಸಿ ಗೆದೆಯುವುದು. ಭಗವಂತನ ಅನುಗ್ರಹವೆ ಜೀವಕ್ಕೆ ಅನಂತವಾದ ವಿಜಯ. ಇಂಥ ಆತ್ಮಜಯದ ಬಗೆಗೆಯೆ ಅವನ ಬಗೆ ಹಾತೊರೆಯುತ್ತಿತ್ತು. ಅದಕ್ಕೆಂದೆ ಅವನು ಪದೇಪದೇ ಸನ್ಯಾಸದ ಬಯಕೆಯನ್ನು ವ್ಯಕ್ತಪಡಿಸುತ್ತಾನೆ. ಧರ್ಮದೇವತೆಯ ಅವತಾರವಾದ ಧರ್ಮರಾಜನಿಗೆ ಯುಕ್ತವಾದ ಮನೋವೃತ್ತಿ. ಅಂಥ ಮನೋವೃತ್ತಿಗೆ ಅನುಗುಣವಾಗಿಯೆ ಆ ಶಂಖಕ್ಕೆ ಅಂಥದೇ ಹೆಸರು : ಅನಂತ ವಿಜಯ.

ಇಲ್ಲಿ ಸಂಜಯ ಅರ್ಥಪೂರ್ಣವಾಗಿ ಮೂರು ವಿಶೇಷಣಗಳನ್ನು ಉಲ್ಲೇಖಿಸುತ್ತಾನೆ.
ರಾಜ, ಕುಂತೀಪುತ್ರ ಮತ್ತು ಯುಧಿಷ್ಠಿರ. ಹಿಂದೆ ದುರ್ಯೋಧನನನ್ನೂ ರಾಜನೆಂದು ಉಲ್ಲೇಖಿಸಿದ್ದ: **‘ರಾಜಾ ವಚನಮಬ್ರವೀತ್’**. ಇಲ್ಲಿ ಧರ್ಮರಾಜನ್ನು ರಾಜನೆಂದು ಕರೆದ : **‘ರಾಜಾ ಕುಂತೀಪುತ್ರೋ ಯುಧಿಷ್ಠಿರಃ’**. ಅದರೆ ಅಲ್ಲಿಯ ಹಿನ್ನೆಲೆಯೇ ಬೇರೆ; ಇಲ್ಲಿಯ ಹಿನ್ನೆಲೆಯೇ ಬೇರೆ.

ದುರ್ಯೋಧನ ಆಚಾರ್ಯದ್ರೋಣರ ಮುಂದೆ ಶಿಷ್ಯನಂತೆ ನಡೆದುಕೊಳ್ಳಲಿಲ್ಲ. ರಾಜನೆಂಬ ಠೀವಿಯಿಂದ, ಅಹಂಕಾರದಿಂದ ಮಾತನಾಡಿದ ಎನ್ನುವ ಅರ್ಥದಲ್ಲಿ ಅಲ್ಲಿ **‘ರಾಜಾ’** ಪದ ಬಂದಿತ್ತು. ಅದು ದುರ್ಯೋಧನನ ಪ್ರಶಂಸೆಯಲ್ಲ; ಪರಿಹಾಸ. ದುರ್ಯೋಧನನ ಔದ್ಧತ್ಯವನ್ನು ಧೃತರಾಷ್ಟ್ರನಿಗೆ ಮನವರಿಕೆ ಮಾಡಲು ಬಳಸಿದ ಅಣಕುನುಡಿ.

ಧರ್ಮರಾಜನ ಪರಿಸ್ಥಿತಿ ಬೇರೆ. ಅವನು ಈಗ ವಾಸ್ತವವಾಗಿ ರಾಜನಲ್ಲ : ರಾಜ್ಯಭ್ರಷ್ಟ.
ಯುದ್ಧದಲ್ಲಿ ಗೆದ್ದರೆ ಮಾತ್ರವೆ ರಾಜನಾಗಬಲ್ಲವ. ಆದರೆ ಸಂಜಯ ಯುದ್ಧಾರಂಭದಲ್ಲೆ ಅವನನ್ನು ‘ರಾಜಾ’ ಎಂದು ಕರೆಯುತ್ತಾನೆ!

ಇದು ಕೂಡ ಧೃತರಾಷ್ಟ್ರನನ್ನು ಅಣಕಿಸುವುದಕ್ಕಾಗಿಯೆ ಆಡಿದ ಮಾತು. ಇದರಿಂದ ಸಂಜಯ ಧ್ವನಿಸುವ ಮಾತು ಇದು : “ನಿನ್ನ ಮಕ್ಕಳ ದೌರಾತ್ಮ್ಯದಿಂದ ಧರ್ಮರಾಜ ರಾಜ್ಯ ಕಳೆದುಕೊಂಡರೇನು? ನಿನ್ನ ಮಕ್ಕಳ ದುಷ್ಟತನಕ್ಕೆ ನೀನು ಕುಮ್ಮಕ್ಕು ಕೊಟ್ಟು ಯುದ್ಧ ಅನಿವಾರ್ಯವಾಗುವಂತೆ ಮಾಡಿದರೇನು? ಕೃಷ್ಣನ ನೇತೃತ್ವದಲ್ಲಿ ಅವನು ವಿಜಯಿಯಾಗಿ ರಾಜನಾಗಿಯೆ ತೀರುತ್ತಾನೆ”.

ಇನ್ನೂ ಒಂದು ರೀತಿಯಿಂದ ಈ ಮಾತು ಅರ್ಥಪೂರ್ಣವಾಗಿದೆ : "ನೀನು ನಿನ್ನ ಮಗನಿಗೆ ಪಟ್ಟಕಟ್ಟಿದರೂ ಅವನು ನ್ಯಾಯವಾಗಿ ರಾಜನಲ್ಲ, ಭರತವಂಶದ ಸಿಂಹಾಸನವನ್ನೇರಿದ್ದವನು ಪಾಂಡು. ಅವನ ಹಿರಿಮಗ, ದುರ್ಯೋಧನನಿಗಿಂತಲೂ ಹಿರಿಯನಾದ ಧರ್ಮರಾಜನೆ ನಿಜವಾಗಿ ರಾಜನಾಗಬೇಕಾದವ. ಅವನು ರಾಜನಲ್ಲದಿದ್ದರೂ ನಾನು ಅವನನ್ನೆ ನಿಜವಾದ ರಾಜನೆಂದು ಪರಿಗಣಿಸುತ್ತೇನೆ. ಪುತ್ರಮೋಹದಿಂದ ಕುರುಡನಾದ ನಿನಗೆ ಮಾತ್ರವೆ ಈ ಮಾತು ಅರ್ಥವಾಗುತ್ತಿಲ್ಲ".

ಹೀಗೆ ಸಂಜಯ ಒಂದೊಂದು ಮಾತಿನ ಮೂಲಕವೂ ಧೃತರಾಷ್ಟ್ರನ ಕುರುಡು ಮನಸ್ಸನ್ನು ಚಾಟಿಯೇಟಿನಿಂದ ಬಡಿದೆಬ್ಬಿಸುತ್ತಾನೆ. ಅಂಕುಶದಿಂದ ತಿವಿದು ತಿವಿದು ಕೆಣಕುತ್ತಾನೆ!

ಕುಂತೀಪುತ್ರ ಎನ್ನುವುದು ಎರಡನೆಯ ವಿಶೇಷಣ. ಇದೂ ತುಂಬ ಅರ್ಥಪೂರ್ಣವದದ್ದು : "ಧರ್ಮರಾಜ ಈ ತನಕ ನಿಜವಾದ ಕುಂತೀಪುತ್ರನಂತೆ ನಡೆದುಕೊಳ್ಳಲಿಲ್ಲ. ಆದರೆ ಈಗ ನಿಜವಾದ 'ಕುಂತೀಪುತ್ರ'ನಾಗಲು ತೀರ್ಮಾನಿಸಿ ನಿಂತಿದ್ದಾನೆ".

ಈ ಮಾತು ಸ್ಫುಟವಾಗಬೇಕಾದರೆ ಹಿಂದಿನ ಒಂದು ಘಟನೆಯನ್ನು ನೋಡಬೇಕು. ಕೃಷ್ಣ ಸಂಧಾನ ಮುರಿದು ಪಾಂಡವರ ಬಳಿಗೆ ಮರಳುವಾಗ ಕುಂತೀಯನ್ನು ಕಾಣುತ್ತಾನೆ. ಕುಂತೀ ಕೃಷ್ಣನ ಬಳಿ ಧರ್ಮರಾಜನಿಗೊಂದು ಸಂದೇಶ ಕಳಿಸುತ್ತಾಳೆ : "ಕ್ಷತ್ರಿಯಸ್ತ್ರೀ ಶತ್ರುಗಳ ಎದೆಮೆಟ್ಟಿ ನಿಲ್ಲುವ ವೀರನಾದ ಮಗನನ್ನು ಬಯಸುತ್ತಾಳೆ. ಹೇಡಿಯಾಗಿ ಬದುಕುವ ಮಗನಿಗಿಂತ ಹೋರಾಡಿ ಸಾಯುವ ಮಗನನ್ನು ಅವಳು ಹೆಚ್ಚು ಮೆಚ್ಚುತ್ತಾಳೆ. ನೀನು ವೀರ ಕ್ಷತ್ರಿಯನಾಗು. ಅನ್ಯಾಯದ ವಿರುದ್ಧ ಹೋರಾಡು. ತಾಯಿಗೆ ಸಂತಸ ನೀಡುವ ಮಗನಾಗು".

ಧರ್ಮರಾಜ ಈಗ ತಾಯಿಯ ಸಂದೇಶವನ್ನು ಪೂರ್ತಿಯಾಗಿ ಕಾರ್ಯರೂಪಕ್ಕೆ ತರಲು ಕಟಿಬದ್ಧನಾಗಿದ್ದಾನೆ. ಅವನ ದಾಕ್ಷಿಣ್ಯಶೀಲಕ್ಕೆ, ಕ್ಷಮಾಶೀಲಕ್ಕೆ ವಿರುದ್ಧವಾಗಿ ನಿಜವಾದ 'ಕುಂತೀಪುತ್ರ'ನಾಗಲು ನಿರ್ಧರಿಸಿದ್ದಾನೆ. ಆ ವೀರಮಹಿಳೆಯ ವೀರಪುತ್ರನ ಈ ನಿರ್ಧಾರವನ್ನು ಇನ್ನು ಯಾರೂ ವಿಚಲಿತಗೊಳಿಸುವಂತ್ತಿಲ್ಲ– ಇದು ಸಂಜಯನ ಮಾತಿನ ಭಾವ. ಕುಂತೀಯ ಕ್ಷಾತ್ರ ಸ್ವಭಾವವನ್ನು ಚೆನ್ನಾಗಿ ಬಲ್ಲ ಧೃತರಾಷ್ಟ್ರನಿಗೆ ಇದು ತಟ್ಟನೆ ತಿಳಿಯುವಂತ ಮಾತು.

ಕೊನೆಯ ವಿಶೇಷಣ ಅದನ್ನೆ ಸಮರ್ಥಿಸುತ್ತದೆ. **"ಯುಧಿಷ್ಠಿರ"**. ಇದರ ಅರ್ಥ ಯುದ್ಧದಲ್ಲಿ ಸ್ಥಿರವಾಗಿ ನಿಂತು ಹೋರಾಡಬಲ್ಲವನು.

ಅವನಿಗೆ **'ಯುಧಿಷ್ಠಿರ'**ನೆಂಬ ಹೆಸರು ಸಾರ್ಥಕವಾದದ್ದೆ. ಅವನು ಈ ತನಕ ಯಾರೊಡನೆಯೂ ಯುದ್ಧಕ್ಕೆ ಇಳಿಯದೆ ಇರಬಹುದು. ಅವನ ಶಾಂತ ಸ್ವಭಾವವನ್ನು ದೌರ್ಬಲ್ಯ ಎಂದು ಭ್ರಮಿಸಬೇಡ, ಅವನು ಸಹಜವಾಗಿ ಯುದ್ಧವನ್ನು ಬಯಸುವುದಿಲ್ಲ. ಆದರೆ ಒಮ್ಮೆ ಯುದ್ಧಕ್ಕೆ ಇಳಿದನೆಂದರೆ ಕೊನೆಯತನಕವೂ ಸ್ಥಿರವಾಗಿ ನಿಂತು ಹೋರಾಡಬಲ್ಲವನು. ಈ ತನಕ ಅವನು ಯುದ್ಧ ಬೇಕೋ ಬೇಡವೋ ಎಂದು ಕೊಂಚ ಅಸ್ಥಿರನಾದದ್ದು ನಿಜ. ಆದರೆ ಪರಿಸರದ ಅನಿವಾರ್ಯತೆಯಿಂದ ನೀನೆ ಅವನನ್ನು ಸ್ಥಿರಗೊಳಿಸಿದ್ದೀಯಾ. ತಾಯಿಯ ಸಂದೇಶದಿಂದ ಅವನು ಇನ್ನಷ್ಟು ಸ್ಥಿರವಾಗಿ ಗಟ್ಟಿ ಮನಸ್ಸಿನಿಂದ ಯುದ್ಧಕ್ಕೆ ಇಳಿದಿದ್ದಾನೆ. ಕೊನೆಯ ಜಯದ ತನಕವೂ ಅವನು ಸ್ಥಿರವಾಗಿ ನಿಲ್ಲುವವನೆ. ಈ ಶಂಖನಾದದಲ್ಲಿ ಅವನು ತನ್ನ ಸ್ಥಿರ ನಿರ್ಧಾರವನೆಲ್ಲ ಪಡಿಮೂಡಿಸಿದ್ದಾನೆ.

ಹೀಗೆ ಎಚ್ಚರಿಸಿದ ಸಂಜಯ ಧೃತರಾಷ್ಟ್ರನನ್ನು ಹೀಗೆ ಕೆಣಕುವಂತಿದೆ : "ನೀನೆ ಸಂಧಾನಕ್ಕೆ ಇಂಬು ಕೊಡದೆ ಅವನನ್ನು ಯುದ್ಧಕ್ಕೆ ಇಳಿಸಿದ್ದೀಯಾ. ಆದರಿಂದ ಅದರ ಪರಿಣಾಮಗಳಿಗೆ ಸಿದ್ಧನಾಗು. ನೀನು ಕುರುಡನಾದರೂ ಕಿವುಡನಲ್ಲ. ಅದರಿಂದ ನೀನು ಬಹಳಷ್ಟು ಅಪ್ರಿಯವಾದ ಸುದ್ದಿಗಳನ್ನು ಕೇಳಬೇಕಾಗಿದೆ. ನಿನ್ನ ಅಚಾತುರ್ಯದ ಫಲವನ್ನು ನೀನೆ ಉಣ್ಣಬೇಕು. ಅದಕ್ಕೆ ಈಗಲೇ ಅಣಿಯಾಗು, ಮನಸ್ಸನ್ನು ಗಟ್ಟಿಮಾಡಿಕೋ".

❋❋❋❋

**ಲೇಖಾಂಕ: ೨೨**

# ಭಗವದ್ಗೀತೆ

**–ಬನ್ನಂಜೆ ಗೋವಿಂದಾಚಾರ್ಯ**

ಕುಂತೀಪುತ್ರರಲ್ಲಿ ಮೊದಲಿಗನಾದ ಯುಧಿಷ್ಠಿರ ಕೊನೆಯದಾಗಿ ಶಂಖ ಊದಿದ. ಈಗ ಮಾದ್ರೀಪುತ್ರರ ಸರದಿ :

**ನಕುಲ ಸಹದೇವಶ್ಚ ಸುಘೋಷ–ಮಣಿಪುಷ್ಪಕೌ ।**

ಅಣ್ಣಂದಿರು ಮೂವರು ಶಂಖ ಊದಿದಾಗ ತಮ್ಮಂದಿರಾದ ನಕುಲ–ಸಹದೇವರೂ ಶಂಖ ಊದಿ–ಹೋರಾಟಕ್ಕೆ ತಾವು ಸಿದ್ಧ ಎಂದು ಸಂದೇಶ ನೀಡಿದರು.

ಇಲ್ಲಿಯೂ ಒಂದು ಸ್ವಾರಸ್ಯವಿದೆ. ಈ ಅವಳಿ ಮಕ್ಕಳಲ್ಲಿ ನಕುಲ ಮೊದಲು ಹುಟ್ಟಿದವ; ಅನಂತರ ಹುಟ್ಟಿದವ ಸಹದೇವ. ಅವಳಿ ಮಕ್ಕಳಲ್ಲಿ ಮೊದಲು ಹುಟ್ಟಿದವ ತಮ್ಮ. ಮತ್ತೆ ಹುಟ್ಟಿದವ ಅಣ್ಣ ಎಂದು ಪ್ರಾಚೀನರು ಹೇಳುತ್ತಾರೆ.

**"ಯಮಯೋಃ ಪೂರ್ವಜಾತಃ ಕನೀಯಾನ್"**

ಹಾಗೆ ನೋಡಿದರೆ ಮೊದಲು ಹುಟ್ಟಿದ ನಕುಲನೆ ತಮ್ಮನಾಯಿತು. ಇಲ್ಲೂ ತಮ್ಮನೇ ಶಂಖವನ್ನೂದಿದ; ಅನಂತರ ಅವನ ಅಣ್ಣ ಸಹದೇವ ಶಂಖ ಊದಿದ.

ನಕುಲನ ಶಂಖ ಸುಘೋಷ; ಸಹದೇವನದು ಮಣಿಪುಷ್ಪ ಅಥವಾ ಮಣಿಪುಷ್ಪಕ.

**'ಸುಘೋಷ'** ಎಂದರೆ ಅನಾಯಾಸವಾಗಿ ಊದಬಹುದಾದ ಮತ್ತು ದೂರಕ್ಕೆ ಕೇಳಿಸಬಲ್ಲಂತೆ ದೊಡ್ಡದಾಗಿ ಸದ್ದು ಮಾಡುವ ಶಂಖ [**ಸುಷ್ಠು ಸುಖೇನ ವಾ ಘೋಷತಿ ಇತಿ ಸುಘೋಷಃ । ಘುಷಿರ್ ಶಬ್ದೇ ಘುಷಿರ್ ಉಚ್ಚೈಃ ಶಬ್ದೇ ವಾ । ಚುರಾದಿಃ । ಸುಷ್ಠು ಘೋಷಯತಿ ಇತಿ ಸುಘೋಷಃ ।** ].

**'ಮಣಿಪುಷ್ಪಕ'** ಎಂದರೆ ಮುತ್ತೇ ಹೂವಾಗಿ ಅರಳಿದಂತೆ ಚಲುಗೊಂಡ ಶಂಖ [ಮಣಿಃ ಪುಷ್ಪಮಿವ ಮಣಿ ಪುಷ್ಪಕಮ್].

**'ಮಣಿ'** ಎಂದರೆ ಸದ್ದು ಮಾಡುವಂತದು. ಸದ್ದುಮಾಡುವ ಅರಳಿದ ಹೂ ಎಂದೂ ಅರ್ಥ ಮಾಡಬಹುದು [**ಮಣಿ ಶಬ್ದೇ । ಮಣತೀತಿ ಮಣಿಃ । ಪುಷ್ಪ ವಿಕಸನೇ । ಪುಷ್ಪ್ಯತೀತಿ ಪುಷ್ಪಮ್ ।** ].

ಎರಡೂ ಶಂಖದ ಆಕೃತಿ–ಸ್ವಭಾವಕ್ಕೆ ಅನುಗುಣವಾಗಿ ಇಟ್ಟ ಸುಂದರವಾದ ಹೆಸರುಗಳು.

ಕೃಷ್ಣನ ಪಾಂಚಜನ್ಯವನ್ನು ಬಿಟ್ಟರೆ–ಮಹಾಭಾರತ ಹೆಸರಿಟ್ಟು ಕರೆದ ಶಂಖಗಳೆಂದರೆ ಪಾಂಡವರ ಐದು ಶಂಖಗಳು ಮಾತ್ರ. ಉಳಿದ ಎರಡೂ ಕಡೆಯ ಮಹಾವೀರರ ಶಂಖಗಳಿಗೆ ಹೆಸರಿತ್ತೋ ಇಲ್ಲವೋ ಗೊತ್ತಿಲ್ಲ. ಮಹಾಭಾರತವಂತೂ ಹೆಸರಿಸುವುದಿಲ್ಲ.

ಪಾಂಡವರ ಐದು ಶಂಖಗಳ ಹೆಸರನ್ನಾದರೂ ಮಹಾಭಾರತ ಈ ಮೊದಲು ಎಲ್ಲೂ ಹೇಳಿದಂತಿಲ್ಲ. ಗೀತೆಯಲ್ಲೇ ಮೊದಲ ಬಾರಿ ಈ ಹೆಸರುಗಳು ಉಲ್ಲೇಖ ಗೊಂಡಿವೆ ಎನ್ನುವುದು ಗಮನಿಸಬೇಕಾದ ಅಂಶ.

ಈಗ ಪ್ರಕಟವಾದ ಭಾರತದ ಪಾಠದಂತೆ ಅರ್ಜುನನ ಶಂಖ ದೇವದತ್ತದ ಉಲ್ಲೇಖ ಸಭಾಪರ್ವದಲ್ಲಿ ಒಮ್ಮೆ ಬಂದಿದೆ.

**ಅಸ್ತಿ ಬಿಂದುಸರಸ್ಯಗ್ರ್ಯಾ ಗದಾ ಚ ಕುರುನಂದನ ।**
**ನಿಹಿತಾ ಭಾವಯಾಮ್ಯೇವಂ ರಾಜ್ಞಾ ಹತ್ವಾ ರಣೇ ರಿಪೂನ್ ॥ [೩.೫]**
**ವಾರುಣಶ್ಚ ಮಹಾಶಂಖೋ ದೇವದತ್ತಃ ಸುಘೋಷವಾನ್ । [೩.೮]**

[ಮಯಃ – "ಓ ಅರ್ಜುನ, ಕೈಲಾಸದ ಬಿಂದುಸರೋವರದ ಬಳಿ ಶತ್ರುಭಯಂಕರವಾದ ಗದೆಯೊಂದಿದೆ. ಹಿಂದೆ ಮಾಂಧಾತ ರಾಜನು ಆ ಗದೆಯಿಂದ ಶತ್ರುಗಳನ್ನು ಸದೆಬಡಿದು ಮುಂದೆ ಭೀಮಸೇನನಿಗಾಗಿಯೆ ಅಲ್ಲಿ ಹುದುಗಿಸಿಟ್ಟಿರಬೇಕು ಎಂದು ನಾನು ಭಾವಿಸುತ್ತೇನೆ....ಹಾಗೆಯೇ ಸಮುದ್ರೋದ್ಭವವಾದ, ಘೋಷಯುಕ್ತವಾದ ದೇವದತ್ತವೆಂಬ ಮಹಾಶಂಖವೂ ಅಲ್ಲಿದೆ].

**ಗದಾಂ ಚ ಭೀಮಸೇನಾಯ ಪ್ರವರಾಂ ಪ್ರದದೌ ತದಾ ।**
**ದೇವದತ್ತಂ ಚಾರ್ಜುನಾಯ ಶಂಖಪ್ರವರಮುತ್ತಮಮ್ ॥ [೩.೨೧]**

[ಅನಂತರ ಮಯ ಶ್ರೇಷ್ಠವಾದ ಆ ಗದೆಯನ್ನು ಭೀಮಸೇನನಿಗೆ ತಂದಿತ್ತ. ಉತ್ತಮವಾದ ದೇವದತ್ತವೆಂಬ ಆ ಹಿರಿಯ ಶಂಖವನ್ನು ಅರ್ಜುನನಿಗೆ ಒಪ್ಪಿಸಿದ].

ಅದರೆ ಈ ಉಲ್ಲೇಖದ ಪ್ರಾಮಾಣಿಕತೆಯ ಬಗ್ಗೆ ನನಗೆ ಸಂದೇಹವಿದೆ. ಅರ್ಜುನ ನಿವಾತಕವಚರ ವಧೆಗೆ ಹೊರಟಾಗ ದೇವತೆಗಳು ಅವನಿಗೆ ಈ ಶಂಖವನ್ನು ಕೊಟ್ಟರು ಎಂದು ಮಹಾಭಾರತದಲ್ಲೇ ವನಪರ್ವದಲ್ಲಿ ಬಂದಿದೆ. ಈ ಕಥೆಯನ್ನು ನಾವು ಈಗಾಗಲೆ ಉಲ್ಲೇಖಿಸಿದ್ದೇವೆ. ಸಭಾಪರ್ವದ ಈ ಉಲ್ಲೇಖ ಅದಕ್ಕೆ ವಿರುದ್ಧವಾಗುತ್ತದೆ. ಮಯ ಮೊದಲೇ ಆ ಶಂಖವನ್ನು ಅರ್ಜುನನಿಗೆ ಕೊಟ್ಟಿದ್ದರೆ ಅದನ್ನೆ ಪುನಃ ದೇವತೆಗಳು ಕೊಡುವ ಔಚಿತ್ಯವೇನು? ಅದರಿಂದ ಸಭಾಪರ್ವದ ಈ ವಚನ ಮೂಲ ಪಾಠದ್ದಲ್ಲ–ಅನಂತರ ಪ್ರಕ್ಷಿಪ್ತವಾಗಿರಬೇಕು ಎಂದು ಕಾಣುತ್ತದೆ.

ಮಹಾಭಾರತಕ್ಕೆ ನಿರ್ಣಾಯಕ ಅರ್ಥವನ್ನು ಬರೆದ ಆಚಾರ್ಯ ಮಧ್ವರೂ ಮಯ ಭೀಮಸೇನನಿಗೆ ಗದೆಯನ್ನು ತಂದುಕೊಟ್ಟ ಅಂಶವನ್ನು ಮಾತ್ರ ಉಲ್ಲೇಖಿಸುತ್ತಾರೆ. ಆ ಸಂದರ್ಭದಲ್ಲಿ ದೇವದತ್ತ ಶಂಖದ ಪ್ರಸ್ತಾಪವೇ ಇಲ್ಲ.

**ಜನಾರ್ದನಾಜ್ಞಯಾ ಮಯಃ ಸಮಸ್ತಕೌತುಕೋತ್ತರಾಮ್ ।**
**ಸಭಾಂ ವಿಧಾಯ ಭೂಭೃತೇ ದದೌ ಗದಾಂ ವೃಕೋದರೇ ॥**
**ಸ ವಾಯುಧಾರಿತಾಂ ಗದಾಂ ಹಿ ಯೌವನಾಶ್ವಭೂಭೃತಾ ।**
**ಪ್ರಸಾದತೋऽಸ್ಯ ಲಂಭಿತಾಮವಾಪ್ಯ ಮೋದಮಾಪ ಹ ॥ [ಮ.ಭಾ.ತಾ.ನಿ. ೨೧-೧-೨].**

[ಮಯಾಸುರನು ಶ್ರೀಕೃಷ್ಣನ ಅಣತಿಯಂತೆ ಶಿಲ್ಪಶಾಸ್ತ್ರದ ವಿಸ್ಮಯದಲ್ಲೆ ಸಾಟಿಯಿಲ್ಲದ ರಚನೆಯಾದ ಸಭಾಭವನವನ್ನು ಪಾಂಡವರಿಗಾಗಿ ರಚಿಸಿಕೊಟ್ಟನು. ಹಾಗೆಯೇ ಭೀಮಸೇನನಿಗೆ ಗದೆಯೊಂದನ್ನು ಉಡುಗೊರೆಯಾಗಿತ್ತನು. ಅದು ವಾಯುದೇವನು ತನ್ನ ಮೂಲರೂಪದಲ್ಲಿ ಧರಿಸಿದ ದೈವೀ ಗದೆ. ವಾಯುದೇವನ ಅನುಗ್ರಹದಿಂದ ಯವನಾಶ್ವ ಪುತ್ರ ಚಕ್ರವರ್ತಿ ಮಾಂಧಾತನೂ ಅದನ್ನು ಬಳಸಿದ್ದ. ಅದೇ ತನ್ನ ಗದೆಯನ್ನು ವಾಯುಪುತ್ರನಾದ ಭೀಮಸೇನ ಪಡೆದು ಸಂತಸಗೊಂಡ].

ಇಲ್ಲಿ ಶಂಖದ ಉಲ್ಲೇಖ ಇಲ್ಲದಿರುವುದು ಗಮನಾರ್ಹ. ಮುಂದೆ ನಿವಾತಕವಚರ ಜತೆ ಯುದ್ಧಕ್ಕೆ ತೆರಳಿದಾಗ ದೇವತೆಗಳು ದೇವದತ್ತ ಶಂಖವನ್ನು ಅರ್ಜುನನಿಗಿತ್ತ ಕಥೆಯನ್ನು ಆಚಾರ್ಯರು ಉಲ್ಲೇಖಿಸಿದ್ದಾರೆ. ಅದನ್ನು ನಾವು ಈ ಮೊದಲೇ ನೋಡಿದ್ದೇವೆ. ಹಾಗಾಗಿ ಸಭಾಪರ್ವದ ಭಾಗ ಪ್ರಕ್ಷಿಪ್ತವಿರಬೇಕು ಎನ್ನುವ ನಿರ್ಧಾರ ಹೆಚ್ಚು ಸಕಾರಣವಾಗಿದೆ.

[ಒಂದು ವೇಳೆ ಸಭಾಪರ್ವದ ಕಥೆಯೂ ಪ್ರಾಮಾಣಿಕವೆ ಆಗಿದ್ದರೆ ಹೀಗೊಂದು ಊಹೆಗೆ ಅವಕಾಶವಿದೆ : ಮಯಕೊಟ್ಟ ಶಂಖಕ್ಕೆ **'ದೇವದತ್ತ'** ಎಂಬಂತೆಯೆ ಇನ್ನೊಂದು ಹೆಸರನ್ನು ಭಾರತದಲ್ಲಿ ಕಾಣುತ್ತೇವೆ. **'ಸುಘೋಷವಾನ್'.** ಹಾಗಾದಾರೆ ಮಯ ತನಗಿತ್ತ ಶಂಖವನ್ನೇ ಅರ್ಜುನ ತನ್ನ ಸೋದರನಾದ ನಕುಲನಿಗೆ ಕೊಟ್ಟಿರಬಹುದೆ? ಅದರಿಂದಾಗಿ ಮತ್ತೆ

ದೇವತೆಗಳು ಕೊಟ್ಟ ಶಂಖವನ್ನು ಅರ್ಜುನ ತನಗಾಗಿ ಇಟ್ಟುಕೊಂಡ. ಅದಕ್ಕಾಗಿ ಅದು ದೇವದತ್ತವೆಂದೇ ಪ್ರಸಿದ್ಧವಾಯಿತು. ನಕುಲ ತನ್ನ **'ಸುಘೋಷವಾನ್'** ಶಂಖವನ್ನು ಸುಘೋಷ ಎಂದು ಕರೆದಿರಬಹುದು. ಆದರೆ ಇದು ಕೇವಲ ಊಹೆ ಮಾತ್ರ. ಸಾಕಷ್ಟು ಪುರಾವೆಗಳು ದೊರಕುವವರೆಗೆ ಏನನ್ನೂ ನಿರ್ಧಾರವಾಗಿ ಹೇಳುವಂತಿಲ್ಲ].

ಈ ಎಲ್ಲ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ–ಪಾಂಡವರ ಶಂಖಗಳ ಹೆಸರಿನ ಉಲ್ಲೇಖ ಮೊದಲ ಬಾರಿಗೆ ಬಂದದ್ದು ಗೀತೆಯಲ್ಲೆ ಎನ್ನುವ ಮಾತು ಹೆಚ್ಚು ಸಂಗತವಾಗುತ್ತದೆ.

ಗೀತೆಯ ಅನಂತರವೂ ಇವುಗಳ ಹೆಸರುಗಳನ್ನು ಭಾರತ ಉಲ್ಲೇಖಿಸುವುದಿಲ್ಲ.
[ಅರ್ಜುನನಿಗೆ ದೇವದತ್ತ ಶಂಖ ದೊರಕಿದ ಕಥೆಯ ಪ್ರಸಂಗವೊಂದನ್ನು ಬಿಟ್ಟು]. ದಾಕ್ಷಿಣಾತ್ಯ ಪಾಠದಂತೆ ಭೀಮನ ಪೌಂಡ್ರ ಮತ್ತೆ ಯುಧಿಷ್ಠಿರನ ಅನಂತವಿಜಯದ ಜತೆಗೆ ನಕುಲ ಸಹದೇವರ ಸುಘೋಷ–ಮಣಿಪುಷ್ಪಗಳ ಉಲ್ಲೇಖ ಇನ್ನೊಂದು ಬಾರಿ ಶಲ್ಯಪರ್ವದಲ್ಲಿ ಬರುತ್ತದೆ. ದುರ್ಯೋಧನ ಪಾತವಾದ ಮೇಲೆ ಯುದ್ಧದ ಕೊನೆಯ ಘಟ್ಟದಲ್ಲಿ ಪಾಂಡವರು ತಮ್ಮ ಶಂಖದಿಂದ ವಿಜಯನಾದ ಮಾಡಿದರಂತೆ. ಸುಮಾರಾಗಿ ಗೀತೆಯಲ್ಲಿ ಬಂದ ರೀತಿಯಲ್ಲೆ ಅಲ್ಲೂ ತದ್ವತ್ತಾಗಿ ಶ್ಲೋಕಗಳು ಬಂದಿವೆ.

**ದೇವದತ್ತಂ ಪ್ರಹೃಷ್ಟಾತ್ಮಾ ಶಂಖಪ್ರವರಮರ್ಜುನಃ ।**
**ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ ॥**
**ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ।**
**ನಕುಲಃ ಸಹದೇವಶ್ಚ ಸುಘೋಷ–ಮಣಿಪುಷ್ಪಕೌ ॥ [೬೧. ೭೨–೭೩].**

ಸ್ವಾರಸ್ಯವೆಂದರೆ, ಬಹುಶಃ ಪ್ರಕ್ಷಿಪ್ತವಾಗಿರಬಹುದಾದ ಈ ಶ್ಲೋಕಗಳಲ್ಲಿ ಪಾಂಡವರ ಶಂಖಗಳ ಜತೆಗೆ ದೃಷ್ಟದ್ಯುಮ್ನ ಮತ್ತು ಸಾತ್ಯಕಿಯ ಶಂಖಗಳ ಹೆಸರೂ ಅಪೂರ್ವವಾಗಿ ಉಲ್ಲೇಖಗೊಂಡಿದೆ :

**ಧೃಷ್ಟದ್ಯುಮ್ನಸ್ತಥಾ ಚೈತ್ರಂ ಸಾತ್ಯಕಿರ್ನಂದಿವರ್ಧನಮ್ । [೬೧.೭೪].**

ಈ ಪಾಠದ ಪ್ರಕಾರ ಧೃಷ್ಟದ್ಯುಮ್ನನ ಶಂಖದ ಹೆಸರು ಚೈತ್ರ, ಸಾತ್ಯಕಿಯ ಶಂಖದ ಹೆಸರು ನಂದಿವರ್ಧನ!

ಈ ಸಂದಿಗ್ಧ ಪಾಠದ ಒಂದು ಭಾಗ ಬಿಟ್ಟರೆ ಬೇರೆಡೆ ಪಾಂಡವರ ಶಂಖಗಳ ಹೆಸರಿನ ಉಲ್ಲೇಖ ಬಂದಿರುವುದು ಭಗವದ್ಗೀತೆಯಲ್ಲೇ. ಈ ಭಾಗ ಪ್ರಕ್ಷಿಪ್ತವಲ್ಲ ಎಂದು ಒಪ್ಪಿಕೊಂಡರೂ ಐವರೂ ಪಾಂಡವರ ಶಂಖಗಳ ಹೆಸರನ್ನು ಮೊತ್ತಮೊದಲು ಉಲ್ಲೇಖಿಸಿದ ಕೀರ್ತಿ ಗೀತೆಗೇ ಸಲ್ಲುತ್ತದೆ.

ಶಂಖನಾದ ವೇದನಾದದ ಪ್ರತಿನಿಧಿ ಎನ್ನುತ್ತಾರೆ. ಹಾಗಾದರೆ ಈ ಐದು ಶಂಖಗಳ ಮಂಗಳನಾದ ಐದು ವೇದಗಳ ಪ್ರತೀಕವಿರಬಹುದೆ? ಅರ್ಜುನನ ಶಂಖನಾದ ಋಗ್ವೇದಕ್ಕೆ; ಭೀಮಸೇನನದ್ದು ಯಜುರ್ವೇದಕ್ಕೆ; ಯುಧಿಷ್ಠಿರನದ್ದು ಸಾಮವೇದಕ್ಕೆ; [ಅಥವಾ ಭೀಮಸೇನನದ್ದು ಸಾಮವೇದಕ್ಕೆ; ಯುಧಿಷ್ಠಿರನದ್ದು ಯಜುರ್ವೇದಕ್ಕೆ; **ಭೂರಿತಿ ವಾ ಋಚಃ ಭುವ ಇತಿ ಸಾಮಾನಿ । ಸುವರಿತಿ ಯಜೂಂಷಿ ।**]; ನಕುಲನದ್ದು ಅಥರ್ವವೇದಕ್ಕೆ; ಸಹದೇವನದ್ದು ಇತಿಹಾಸ–ಪುರಾಣಗಳಿಗೆ; **"ಇತಿಹಾಸ–ಪುರಾಣ ಪಂಚಮೋ ವೇದಾನಾಂ ವೇದಃ"** ಎನ್ನುತ್ತಾರಲ್ಲವೆ?

ಈಗ ಈ ಐದು ಜ್ಞಾನಪರಂಪರೆಗೂ ಜನಕನಾದ ಭಗವಂತ ಅರ್ಥಪೂರ್ಣವಾಗಿ ಪಂಚಜನನಾದ. ಸಮಸ್ತ ವೇದವಾಙ್ಮಯವನ್ನೂ ಪ್ರತಿನಿಧಿಸುವ ಅವನ ಶಂಖ ಅನ್ವರ್ಥವಾಗಿ ಪಾಂಚಜನ್ಯವಾಯಿತು. [**ಪಂಚಜನಸ್ಯ ನಾರಾಯಣಸ್ಯ ಇದಂ ಪಾಂಚಜನ್ಯಮ್**].

ಹಾಗಾದರೆ ಅಷ್ಟಾದಶ ವಿದ್ಯಾಸ್ಥಾನಗಳ ಪ್ರತಿನಿಧಿಯಾಗಿಯೆ ಇಲ್ಲಿ ಹದಿನೆಂಟು ಶಂಖಗಳ ನಾದವನ್ನು ಉಲ್ಲೇಖಿಸಿರಬಹುದೆ? ಪಾಂಡವರ ನಾದ ವಿದ್ಯೆಯ ನಾದ. ಕೌರವರ ನಾದ ಅವಿದ್ಯೆಯ ನಾದ, ವಿದ್ಯೆ ಅವಿದ್ಯೆಯನ್ನು ಗೆದ್ದಿತು ಎನ್ನೋಣವೇ? ಇದೊಂದು ತುಂಬ ರೋಚಕವಾದ ಚಿಂತನೆ.

ಈ ಭಾಗವನ್ನು ಆಚಾರ್ಯ ಶಂಕರರು, ಆಚಾರ್ಯ ಮಧ್ವರು ವ್ಯಾಖ್ಯಾನಿಸಿಲ್ಲ ಎಂದು ಈ ಮೊದಲೇ ಹೇಳಿದ್ದುಂಟು. ಆಚಾರ್ಯ ರಾಮಾನುಜರು ಈ ಶ್ಲೋಕಗಳನ್ನು ಸಂಗ್ರಹವಾಗಿ ಹೀಗೆ ವಿವರಿಸಿದ್ದಾರೆ.

"ಕೃಷ್ಣಾರ್ಜುನರ ಶಂಖನಾದದ ಅನಂತರ ಯುಧಿಷ್ಠಿರ ಮತ್ತು ಭೀಮಸೇನಾದಿಗಳು ತಮ್ಮ ಶಂಖಗಳನ್ನು ಪ್ರತ್ಯೇಕವಾಗಿ ತುಂಬಿ ಊದಿದರು."

ಮೂಲದಲ್ಲಿ ಭೀಮಸೇನನ ಅನಂತರ ಯುಧಿಷ್ಠಿರನ ಹೆಸರು ಬಂದಿದೆ. ಅದರ ಔಚಿತ್ಯವನ್ನು ನಾವು ಪರಿಶೀಲಿಸಿದ್ದೇವೆ. ಆದರೆ ಮೂಲದ ಕ್ರಮವನ್ನು ಬದಲಿಸಿ ಯುಧಿಷ್ಠಿರನ ಹೆಸರನ್ನು ಆಚಾರ್ಯ ರಾಮಾನುಜರು ಮೊದಲು ಉಲ್ಲೇಖಿಸುತ್ತಾರೆ! ಶಲ್ಯಪರ್ವದ ದಾಕ್ಷಿಣಾತ್ಯ ಪಾಠಕ್ಕೆ ಇದು ಅನುಗುಣವಾಗಿದೆ. ಅಣ್ಣನ ಹೆಸರು ಮೊದಲು ಬರಬೇಕು ಎಂಬ ಭಾವನೆಯಿಂದ ಅವರು ಈ ಬದಲಾವಣೆ ಮಾಡಿದಂತಿದೆ. ಆದರೆ ಅಣ್ಣತಮ್ಮಂದಿರ ಅನುಕ್ರಮವನ್ನು ಇಲ್ಲಿ ಪೂರ್ತಿಯಾಗಿ ಅನುಸರಿಸಲು ಬರುವುದಿಲ್ಲ. ಯುಧಿಷ್ಠಿರ-ಭೀಮಸೇನರಿಗಿಂತಲು ಮೊದಲು ಅರ್ಜುನನ ಹೆಸರು ಬಂದು ಬಿಟ್ಟಿದೆಯಲ್ಲ. ಇಲ್ಲಿ ಅಗ್ರಜನಿಂದ ಅನುಜನೆಡೆಗೆ ಸಾಗುವ ಕ್ರಮಕ್ಕಿಂತಲು ಅನುಜನಿಂದ ಅಗ್ರಜನೆಡೆಗೆ ಸಾಗುವ ಕ್ರಮವೆ ಹೆಚ್ಚು ಸೂಕ್ತ.

**<u>ಲೇಖಾಂಕ: ೨೩</u>**

# ಭಗವದ್‌ಗೀತೆ

**–ಬನ್ನಂಜೆ ಗೋವಿಂದಾಚಾರ್ಯ**

ಶ್ರೀಕೃಷ್ಣ ಮತ್ತು ಐವರು ಪಾಂಡವರ ಅನಂತರ ಶಂಖನಾದ ಮಾಡಿದವರ ವಿವರ ಮುಂದಿನ ಎರಡು ಶ್ಲೋಕಗಳಲ್ಲಿ ಬಂದಿದೆ :

**ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ ।**
**ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥೧೭॥**
**ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ।**
**ಸೌಭದ್ರಶ್ಚ ಮಹಾಬಾಹುಃ ಶಂಖಾನ್ ದಧ್ಮುಃ ಪೃಥಕ್‌ಪೃಥಕ್ ॥ ೧೮ ॥**

ಐವರೂ ಪಾಂಡವರು ಶಂಖನಾದದ ಮೂಲಕ ತಮ್ಮ ಸಿದ್ಧತೆಯನ್ನು ಘೋಷಿಸಿದರು. ಅನಂತರವೂ ಸೇನಾಪತಿ ಧೃಷ್ಟದ್ಯುಮ್ನ ಶಂಖನಾದ ಮಾಡಲಿಲ್ಲ. ತನ್ನಿಂದ ಹಿರಿಯರ ಸರದಿಗಾಗಿ ಕಾದ. ಪಾಂಡವರ ಸಂದೇಶಕ್ಕೆ ತಮ್ಮ ಕಡೆಯ ಹಿರಿಯರ ಪ್ರತಿಕ್ರಿಯೆಯೇನು ಎನ್ನುವುದನ್ನು ನಿರೀಕ್ಷಿಸುತ್ತ ತಾನು ಸುಮ್ಮನೆ ನಿಂತ.

ಇಂಥ ಸಂದರ್ಭದಲ್ಲಿ–ಪಾಂಡವರ ಸೇನೆಯಲ್ಲಿ ಮೊದಲು ಶಂಖ ಊದಿದವನು ಕಾಶಿರಾಜ : **"ಕಾಶ್ಯಶ್ಚ ಪರಮೇಷ್ವಾಸಃ"**.

ಕಾಶಿರಾಜ ಪ್ರಾಯಃ ಪಾಂಡವರ ಸೇನೆಯಲ್ಲೇ ವಯಸ್ಸಿನಲ್ಲಿ ಹಿರಿಯ. ಆ ಕಾಲದ ಪ್ರಖ್ಯಾತ ಬಿಲ್ಗಾರ. ಭೀಮಸೇನನಿಗೆ ಹೆಣ್ಣು ಕೊಟ್ಟ ಮಾವ. ಅವನದೆ ಶಂಖನಾದದಲ್ಲಿ ಮೊದಲ ಸರದಿ.

ಕಾಶಿರಾಜ ಎಂಥ ಬಿಲ್ಲೋಜನಾಗಿದ್ದ ಎನ್ನುವುದನ್ನು ಈ ಹಿಂದೆಯೆ ನೋಡಿದ್ದೇವೆ. ವೇದಕಾಲದಿಂದಲು ಪ್ರಸಿದ್ಧ ಬಿಲ್ಗಾರರ ಮನೆತನ ಕಾಶಿರಾಜನದು.
ಅದಕ್ಕೆಂದೆ ಸಂಜಯ ಅವನನ್ನು **'ಮಹೇಷ್ವಾಸ'** (ಹಿರಿಯ ಬಿಲ್ಗಾರ) ಎಂದು ಧೃತರಾಷ್ಟ್ರನನ್ನು ಕೆಣಕುವಂತೆ ಉಲ್ಲೇಖಿಸುತ್ತಾನೆ.

ಇನ್ನಿಬ್ಬರು ಈ ಬಣದ ವಯೋವೃದ್ಧರು ದ್ರುಪದ ಮತ್ತು ವಿರಾಟ. ದ್ರುಪದ ಮೊಮ್ಮೊಕ್ಕಳ ಜತೆ ನಿಂತ. ಎಲ್ಲ ಹಿರಿಯರ ಪ್ರತಿನಿಧಿಯಾಗಿ ಕಾಶಿರಾಜ ಶಂಖನಾದ ಮಾಡಿದ್ದರಿಂದ ಮುಂದೆ ಸೇನಾಪತಿಯ ಸರದಿಗಾಗಿ ವಿರಾಟನೂ ಹಿಂದೆ ಸರಿದು ನಿಂತ.

ಸೇನಾಪತಿ ಧೃಷ್ಟದ್ಯುಮ್ನ ತಾನು ಶಂಖವನ್ನು ಕೈಗೆತ್ತಿಕೊಳ್ಳುವ ಮುನ್ನ ತನ್ನ ಅಣ್ಣ ಶಿಖಂಡಿಯನ್ನು ಮುಂದೆ ಮಾಡಿದ. ಹಾಗಾಗಿ ಕಾಶಿರಾಜನ ಅನಂತರ ಶಿಖಂಡಿ ಶಂಖನಾದ ಮಾಡಿದ : **"ಶಿಖಂಡೀ ಚ ಮಹಾರಥಃ"**.

**'ಶಿಖಂಡೀ ಚ'-** ಶಿಖಂಡಿಯೂ ಶಂಖ ಊದಿದ ಎಂದಾಗ ಧೃತರಾಷ್ಟ್ರನ ಮನಸ್ಸಿನಲ್ಲಿ ಹೀಗೊಂದು ಭಾವ ಮೂಡಿರಬಹುದು– "ಶಿಖಂಡಿ ಏನಿದ್ದರೂ ಹುಟ್ಟಿದಾಗ ಹೆಣ್ಣಲ್ಲವೆ? **'ಶಿಖಂಡೀನೀ'** ಎಂದಲ್ಲವೆ ಅವನ ಮೊದಲ ಹೆಸರು. ಈಗ ಗಂಡಾದರೂ ಪೂರ್ವರೂಪದ ಗುಣ ಬಿಟ್ಟುಹೋದೀತೆ? ಅವನು ನಮ್ಮ ಕಡೆಯ ವೀರರಿಗೆ ಎಣೆಯಾಗಲಾರ. ಅವನು ಶಂಖ ಊದಿದರೇನು? ಬಿಟ್ಟರೇನು?"

ಧೃತರಾಷ್ಟ್ರನ ಇಂಥ ಶಂಕೆಯನ್ನು ನಿವಾರಿಸಲೆಂದೆ ಸಂಜಯ ಶಿಖಂಡಿಯನ್ನು **"ಮಹಾರಥಃ"** ಎನ್ನುತ್ತಾನೆ.

ಶಿಖಂಡಿ ಪೌರುಷದಲ್ಲಿ ಯಾವ ಗಂಡಿಗೂ ಕಡಿಮೆಯಿಲ್ಲ. ಅವನು ದ್ರೋಣಾಚಾರ್ಯರ ಬಳಿಯೆ ಶಸ್ತ್ರಾಭ್ಯಾಸ ಮಾಡಿದ ಮಹಾರಥನಲ್ಲವೆ? ಆದರಿಂದ ಅವನ ಶಂಖನಾದಕ್ಕು ನಿನ್ನ ಮಕ್ಕಳ ಎದೆ ನಡುಗಿತು ಎನ್ನುತ್ತಾನೆ ಸಂಜಯ.

ಶಿಖಂಡಿಯ ಅನಂತರ ಅವನ ಸೋದರ–ಸೇನಾಪತಿ ಧೃಷ್ಟದ್ಯುಮ್ನನ ಸರದಿ. ಸೇನಾಪತಿಯ ಸಂದೇಶಕ್ಕೆ ಆ ಕಡೆಯ ಇನ್ನೊಬ್ಬ ಹಿರಿಯನಾದ ವಿರಾಟ ದನಿಕೊಟ್ಟ : **"ಧೃಷ್ಟದ್ಯುಮ್ನೋ ವಿರಾಟಶ್ಚ"**.

ಈಗ ಕೃಷ್ಣನ ಕಡೆಯಿಂದ ಬಂದವ ಸಾತ್ಯಕಿ. ಯಾದವಸೇನೆಯ ಬೆಂಬಲ ಘೋಷಿಸಲು ತಾನು ದನಿಗೂಡಿಸಿದ : **"ಸಾತ್ಯಕಿಶ್ಚಾಪರಾಜಿತಃ"**.

ಸಾತ್ಯಕಿ ಕೃಷ್ಣನ ಕೈಯಲ್ಲಿ ಶಸ್ತ್ರಾಭ್ಯಾಸ ಮಾಡಿದ ಮಹಾವೀರ; ಸೋಲರಿಯದ ಹೋರಾಟಗಾರ : **"ಅಪರಾಜಿತಃ"** –ಎಂದು ಅರ್ಥಪೂರ್ಣವಾಗಿ ಉಲ್ಲೇಖಿಸುತ್ತಾನೆ ಸಂಜಯ.

ಇನ್ನೊಂದು ದೃಷ್ಟಿಯಿಂದ, ಕೊನೆಯಲ್ಲಿ ಬಂದ ಈ ವಿಶೇಷಣ ಈ ಪದ್ಯಾರ್ಧದಲ್ಲಿ ಉಲ್ಲೇಖಗೊಂಡ ಮೂವರಿಗೂ ಅನ್ವಯವಾಗಬಹುದು : **"ಧೃಷ್ಟದ್ಯುಮ್ನಃ ಅಪರಾಜಿತಃ, ವಿರಾಟಶ್ಚ ಅಪರಾಜಿತಃ, ಸಾತ್ಯಕಿಶ್ಚ ಅಪರಾಜಿತಃ"**.

ಸೋಲರಿಯದ ಧೃಷ್ಟದ್ಯುಮ್ನ, ಸೋಲರಿಯದ ವಿರಾಟ ಮತ್ತು ಸೋಲರಿಯದ ಸಾತ್ಯಕಿ. ಧೃತರಾಷ್ಟ್ರನ ಪಕ್ಷಪಾತ ಸ್ವಭಾವದ ದೌರ್ಬಲ್ಯವನ್ನು ಕೆಣಕಲೆಂದು ಬೇಕೆಂದೇ ಸಂಜಯ ಇಂಥ ವಿಶೇಷಣಗಳನ್ನು ಒತ್ತಿ ಬಳಸುತ್ತಾನೆ.

ಕಾಶಿರಾಜ ಶಂಖನಾದ ಮಾಡಿದ. ಕಾಶಿಯ ಸೇನೆ ಸಜ್ಜಾಗಿ ನಿಂತಿತು. ಶಿಖಂಡಿ–ಧೃಷ್ಟದ್ಯುಮ್ನರ ಶಂಖನಾದಕ್ಕೆ ಪಾಂಚಾಲದೇಶದ ಸೇನೆ ಸಜ್ಜಾಯಿತು. ವಿರಾಟ ಶಂಖನಾದ ಮಾಡಿದ, ಮತ್ಸ್ಯದೇಶದ ಸೇನೆ ಸಜ್ಜಾಯಿತು. ಸಾತ್ಯಕಿ ಶಂಖನಾದ ಮಾಡಿದ, ಯಾದವ ಸೇನೆ ಸಜ್ಜಾಯಿತು.

ಪಾಂಡವರ ಕಡೆಗೆ ನಿಂತ ಏಳು ಅಕ್ಷೋಹಿಣಿಯಲ್ಲಿ ಪ್ರಧಾನವಾದ ೪ ಅಕ್ಷೋಹಿಣಿಗಳು ಇವೇ. ಇನ್ನುಳಿದ ಪ್ರಮುಖರೆಂದರೆ ಪಂಚಕೇಕಯರು. ಶಿಶುಪಾಲನ ಮಗ ಧೃಷ್ಟಕೇತು, ಜರಾಸಂಧನ ಮಗ ಸಹದೇವ, ಕುಂತಿ ದೇಶದ ಪುರುಜಿತ್ ಮತ್ತು ಕುಂತಿಭೋಜರು. ಈ ಎಲ್ಲಾ ಮಂದಿಯದು ಸೇರಿ ಒಟ್ಟು ೩ ಅಕ್ಷೋಹಿಣಿ.

ಹೀಗೆ ನಾಲ್ಕು ಅಕ್ಷೋಹಿಣಿಯ ಪ್ರಧಾನರನ್ನು ಸಂಜಯ ಇಲ್ಲಿ ಉಲ್ಲೇಖಿಸಿದ್ದಾನೆ. ಸೇನಾಪತಿ ಧೃಷ್ಟದ್ಯುಮ್ನನ ಶಂಖನಾದ ತನ್ನ ಪಾಂಚಾಲ ಸೇನೆಗಷ್ಟೆ ಸಂದೇಶವಲ್ಲ. ಭೀಷ್ಮರ ಶಂಖನಾದ ೧೧ ಅಕ್ಷೋಹಿಣಿಯನ್ನು ಪ್ರತಿನಿಧಿಸಿದರೆ ಧೃಷ್ಟದ್ಯುಮ್ನನ ಶಂಖನಾದ ೭ ಅಕ್ಷೋಹಿಣಿಯನ್ನು ಪ್ರತಿನಿಧಿಸುತ್ತದೆ. ಹೀಗಾಗಿ– ಈ ತನಕದ ೧೧ ಶಂಖನಾದವೆ ಇಡಿಯ ಸೇನೆಯ ಸಜ್ಜಿಗೆ ಸಂಕೇತವಾಗುತ್ತದೆ. ಇಷ್ಟೇ ಸಾಕು– ದುರ್ಯೋಧನನ ೧೧ ಅಕ್ಷೋಹಿಣಿಯ ಎದೆಗೆಡಿಸಲು!

ಆದರೆ ಪಾಂಡವರ ಕಡೆಯ ಶಂಖನಾದ ಇಲ್ಲಿಗೆ ಮುಗಿಯುವುದಿಲ್ಲ. ಇನ್ನೇಳು ಶಂಖನಾದಗಳನ್ನೂ ಉಲ್ಲೇಖಿಸಿ ಸಂಜಯ ೧೮ ಸಂಖ್ಯೆಯನ್ನು ಪೂರ್ತಿಗೊಳಿಸಿಯೇ ಬಿಡುತ್ತಾನೆ.

ಪಾಂಚಾಲ ಸೇನೆ ತಮ್ಮ ಮುಂದಾಳುಗಳಾದ ಶಿಖಂಡಿ–ಧೃಷ್ಟದ್ಯುಮ್ನರ ಶಂಖನಾದ ಕೇಳಿ ಈಗಾಗಲೇ ಸಜ್ಜಾಗಿ ನಿಂತಿದೆ. ಆದರೆ ಅದು ತಮ್ಮ ವಯೋವೃದ್ಧ ಮಹಾರಾಜನ ಶಂಖಧ್ವನಿಗಾಗಿ ನಿರೀಕ್ಷಿಸುತ್ತಿದೆ. ಮಕ್ಕಳನ್ನು ಮುಂದೆ ಮಾಡಿ ತಾನು ಮೊಮ್ಮಕ್ಕಳ ಜತೆಗೆ ನಿಂತ ಈ ವೃದ್ಧ ವೀರನೂ ಹನ್ನೆರಡನೆಯವನಾಗಿ ಶಂಖನಾದ ಮಾಡಿದ : **"ದ್ರುಪದಃ"**.

ಅಜ್ಜನ ಜತೆಗೆ ಮೊಮ್ಮಕ್ಕಳೂ ದನಿಗೂಡಿಸಿದರು : **"ದ್ರೌಪದೇಯಾಶ್ಚ"**. ಐವರು ದ್ರೌಪದಿಯ ಮಕ್ಕಳು : ಪ್ರತಿವಿಂಧ್ಯ, ಸುತಸೋಮ, ಶ್ರುತಕೀರ್ತಿ, ಶತಾನೀಕ ಮತ್ತು ಶ್ರುತಕರ್ಮ.

ಕೊನೆಯ ಸರದಿ ಸುಭದ್ರೆಯ ಪುತ್ರ ಅಭಿಮನ್ಯುವಿನದು : **"ಸೌಭದ್ರಶ್ಚ ಮಹಾಬಾಹುಃ"**.

ನಿಜವಾಗಿ ಅಭಿಮನ್ಯು ದ್ರೌಪದೇಯರೆಲ್ಲರಿಗಿಂತ ಕಿರಿಯನಲ್ಲ. ಮೊದಲು ಇಬ್ಬರು ಅವನಿಗಿಂತ ಹಿರಿಯರಾದರೂ ಮತ್ತಿನ್ನ ಮೂವರು ಅವನಿಗಿಂತ ಕಿರಿಯರು. ಆದರೆ ಇಲ್ಲಿ ವಯಸ್ಸಿನ ಕ್ರಮ ಮುಖ್ಯವಲ್ಲ. ಕಾಶಿರಾಜನೇನೋ ಹಿರಿತನದಿಂದ ಮೊದಲು ಶಂಖನಾದ ಮಾಡಿದ. ಆದರೆ ದ್ರುಪದ ಕಿರಿಯರನ್ನು ಮುಂದೆಮಾಡಿ ತಾನು ಕಡೆಗೆ ನಿಂತ.

ಅಭಿಮನ್ಯು ಕೂಡ– ಅಣ್ಣಂದಿರಾದ ಪ್ರತಿವಿಂಧ್ಯ–ಸುತಸೋಮರು ಶಂಖನಾದ ಮಾಡಿದಾಗ ತಾನು ಮುಂದೆ ಬರಲಿಲ್ಲ. ಒಡಹುಟ್ಟಿದ ಐವರೂ ತಮ್ಮ ಸರದಿ ಮುಗಿಸಲಿ ಎಂದು ನಿಂತ. ಆವರೆಲ್ಲರದೂ ಮುಗಿದಾಗ ತಾನು ಶಂಖನಾದ ಮಾಡಿದ.

ವಯಸ್ಸಿನಲ್ಲಿ ಚಿಕ್ಕವನಾದರೇನು? ಬೀರದಲ್ಲಿ ಚಿಕ್ಕವನೆ? ಅವನನ್ನು ಎಂಥ ಹಿರಿಯ ವೀರನೂ ಅಲಕ್ಷಿಸುವಂತಿಲ್ಲ ಎನ್ನುತ್ತಾನೆ ಸಚಿಜಯ : **"ಮಾಹಾಬಾಹುಃ"**.

ಪಾಂಡವರ ಕಡೆಯ ಶಂಖನಾದದ ವಿವರವನ್ನು ಸಂಜಯ ನೀಡಿದ ಸೊಗಸೇ ಸೊಗಸು : ಅತ್ಯಂತ ವೃದ್ಧನಾದ ಕಾಶಿರಾಜನಿಂದ, ದ್ರುಪದ–ವಿರಾಟರಿಂದ ಹಿಡಿದು, ಇನ್ನೂ ಹದಿಹರಯದ ದ್ರೌಪದೇಯರು ಮತ್ತು ಅಭಿಮನ್ಯು ಕೂಡ ಉತ್ಸಾಹದಿಂದ ಶಂಖನಾದ ಮಾಡಿದರು. ವೃದ್ಧರಿಂದ ಹಿಡಿದು ಎಳೆಯ ಮಕ್ಕಳ ತನಕ ಎಲ್ಲರಲ್ಲೂ ಎಂಥ ಒಗ್ಗಟ್ಟಿನ ಯುದ್ಧೋತ್ಸಾಹ! ದುರ್ಯೋಧನ ಕಂಗೆಡುವುದಕ್ಕೆ ಇದೊಂದೇ ಸಂಗತಿ ಸಾಲದೆ?

ಶಂಖ ಊದಿದ ಬಗೆಯಲ್ಲು ಇನ್ನೊಂದು ವಿಶೇಷವನ್ನು ಹೇಳುತ್ತಾನೆ ಸಚಿಜಯ : **"ಸರ್ವಶಃ ಶಂಖಾನ್ ದಧ್ಮುಃ"** –ಎಲ್ಲೆಡೆಯಿಂದಲು ಶಂಖಗಳನ್ನೂದಿದರು.

ಎಲ್ಲರೂ ಒಂದೇ ಕಡೆ ನಿಂತು ಶಂಖನಾದ ಮಾಡಿದ್ದಲ್ಲ. ಸೇನೆಯ ಒಂದೊಂದು ಕಡೆ ಒಬ್ಬೊಬ್ಬರು ನಿಂತು ಶಂಖನಾದ ಮಾಡಿದರು. ಪರಿಣಾಮವಾಗಿ ಇಡಿಯ ಸೇನಾಸಮುದಾಯ ಅಖಂಡವಾಗಿ ಒಂದು ದೇಹವೆಂಬಂತೆ ಸಜ್ಜಾಯಿತು.

ಶಂಖಧ್ವನಿಯ ಇನ್ನೊಂದು ವೈಶಿಷ್ಟ್ಯ : **"ಶಂಖಾನ್ ದಧ್ಮುಃ ಪೃಥಕ್–ಪೃಥಕ್"** –ಎಲ್ಲರೂ ಒಮ್ಮೆಲೇ ಶಂಖಗಳನ್ನೂದಲಿಲ್ಲ. ಒಬ್ಬೊಬ್ಬರೂ ಬೇರೆಬೇರೆಯಾಗಿ, ಒಬ್ಬರ ನಂತರ ಒಬ್ಬರು, ಒಬ್ಬೊಬ್ಬರ ಶಂಖಧ್ವನಿಯನ್ನು ಗುರುತಿಸಲು ಸಾಧ್ಯವಾಗುವಂತೆ ಪ್ರತ್ಯೇಕವಾಗಿ ಊದಿದರು. ದುರ್ಯೋಧನನ ಪಾಲಿಗೆ ಇದು ಗಾಯದ ಮೇಲೆ ಬರೆ ಎಳೆದಂತಾಯಿತು.

ಇಲ್ಲಿ ಸಂಜಯ ಧೃತರಾಷ್ಟ್ರನನ್ನು **"ಪೃಥಿವೀಪತೇ"** ಎಂದು ಸಂಬೋಧಿಸುತ್ತಾನೆ. ಇದೂ ಒಂದು ಸಾಕೂತವಾದ ಸಂಬೋಧನೆಯೆ. ಅಣಕ ತುಂಬಿದ ಮಾತು : ನಿನ್ನ ಮಕ್ಕಳು ಜನಾಂಗಹತ್ಯೆಗೆ ತೊಡಗಿದ್ದಾರೆ. ಅದರೂ ನೀನು ಪೃಥಿವೀಪತಿ : ಪೃಥಿವಿಯ ಪಾಲಕ ಎಂದುಕೊಳ್ಳುತ್ತಿರುವೆಯಲ್ಲ? ಇದು ಎಂಥ ವಿಪರ್ಯಾಸ. ನೀನು ನಿಜವಾದ ಪೃಥಿವೀಪತಿ ಯಾಗಿದ್ದರೆ ಪೃಥಿವಿಯ ಮೇಲೆ ನೆತ್ತರು ಹರಿಸುವಂಥ ಈ ಕೆಲಸಕ್ಕೆ ಕೈಹಾಕಲು ನಿನ್ನ ಮಕ್ಕಳಿಗೆ ನೀನು ಬಿಡಬಾರದಿತ್ತು. ಮಕ್ಕಳನ್ನೇ ತಿದ್ದಿ ಸರಿದಾರಿಗೆ ತರಲಾರದವ ನೀನೆಂಥ ಪೃಥಿವಿಯ ಪಾಲಕ? ಇನ್ನಾದಾರೂ ಆತ್ಮಸಮೀಕ್ಷೆ ಮಾಡಿಕೋ ಎನ್ನುತ್ತಿದ್ದಾನೆ ಸಂಜಯ ಈ ಸಂಬೋಧನೆಯ ಮೂಲಕ!

ಮುಂದೆಯೂ ಅನೇಕ ಬಾರಿ ಸಂಜಯ ಧೃತರಾಷ್ಟ್ರನ ತಪ್ಪನ್ನು ಎತ್ತಿ ತೋರಿಸಿ ಅಣಕ ಮಾಡುವುದನ್ನು ಭಾರತದಲ್ಲಿ ಕಾಣುವುದರಿಂದ ಈ ಮಾತಿಗೆ ಪುಷ್ಟಿ ದೊರುಕುತ್ತದೆ.

ಆದರೂ ಸಂಜಯ ಧೃತರಾಷ್ಟ್ರನ ಬಾಲ್ಯ ಸ್ನೇಹಿತ. ಅವನಿಗೆ ಧೃತರಾಷ್ಟ್ರ ಪೃಥಿವೀಪತಿಯಾಗಿರುವುದು ಅಪ್ರಿಯವೇನೂ ಅಲ್ಲ. ಪಕ್ಷಪಾತದಿಂದ ದಾರಿ ತಪ್ಪಬೇಡ. ನಿಜವಾದ ಪೃಥಿವೀಪತಿಯಾಗಿ ನಮಗೆಲ್ಲ ಖುಶಿಕೊಡಲಾರೆಯಾ? ಎಂಬುವ ಪ್ರೀತಿಯ ಧ್ವನಿಯೂ ಈ ಸಂಬೋಧನೆಯ ಹಿನ್ನೆಲೆಯಲ್ಲಿದೆ.

ಇಲ್ಲಿ ಇನ್ನೂ ಒಂದು ಸಂಗತಿಯನ್ನು ಗಮನಿಸಬೇಕು. ಮಹಾಭಾರತಕ್ಕೆ, ಭಗವದ್ಗೀತೆಗೆ ೧೮ ಮುಖ್ಯವಾದ ಸಂಖ್ಯೆ. ಅದರಿಂದ ೧೮ ಮಂದಿಯ ಶಂಖನಾದವನ್ನು ಗೀತೆ ದಾಖಲಿಸುತ್ತದೆ. ಆದರೆ ಪಾಂಡವರ ಕಡೆಯಿಂದ ಆದ ಶಂಖನಾದ ಇಷ್ಟೇ ಎಂದಲ್ಲ. ಇತರ ಸೇನಾನಾಯಕರೂ, ಈ ಹಿರಿಯರ ಬಂಧುಗಳು ಸೇರಿ ನೂರಾರು ಶಂಖನಾದಗಳಾಗಿರಬಹುದು. ಉದಾ : ಸಾತ್ಯಕಿಯ ಜತೆ ಚೇಕಿತಾನ. ವಿರಾಟನ ಜತೆ ಅವನ ಮಕ್ಕಳಾದ ಉತ್ತರ, ಶಂಖ, ಶ್ವೇತರು. **"ಸರ್ವಶಃ ಶಂಖಾನ್ ದಧ್ಮುಃ"** ಎನ್ನುವ ಮಾತು ಈ ಅರ್ಥವನ್ನೂ ಸೂಚಿಸುತ್ತದೆ.

ಇವರೆಲ್ಲ ಮುಖ್ಯವಾಗಿ ಪ್ರಥಮ ದಿನದ ಯುದ್ಧದಲ್ಲಿ ಮುಂಚೂಣಿಯಲ್ಲಿದ್ದವರು : ವಿರಾಟ–ದ್ರುಪದರು ಮತ್ತು ಅವರ ಸೇನೆ; ಪಂಚ ದ್ರೌಪದೇಯರು ಮತ್ತು ಅಭಿಮನ್ಯು, ಈ ಆರು ಮಂದಿ ಬಾಲಕರು ಮೊದಲ ದಿನವೆ ಮುಂಚೂಣಿಯಲ್ಲಿ ನಿಂತು ಹೋರಾಡಿದ್ದನ್ನು ಭಾರತ ವರ್ಣಿಸುತ್ತದೆ. ಮಧ್ಯಾಹ್ನದ ತನಕ ವಿರಾಟನ ಸೇನೆ, ಸಂಜೆ ಹೊತ್ತು ದ್ರುಪದನ ಸೇನೆ ವಿಶೇಷವಾಗಿ ಹೋರಾಟ ನಡೆಸಿತ್ತು. ಇವರಿಗೆ ಬೆಂಬಲವಾಗಿ ನಿಂತು ಆ ಕಡೆಯ ಕೃತವರ್ಮನ ಸೇನೆಯನ್ನು ತಡೆದವನು ಸಾತ್ಯಕಿ. ಪ್ರಥಮ ದಿನದ ಯುದ್ಧದಲ್ಲಿ ಕಾಶಿರಾಜನ ಉಲ್ಲೇಖ ಬಂದಿಲ್ಲ. ಅವನು ಹಿರಿಯನಾಗಿ ಮಾರ್ಗದರ್ಶನ ಮಾಡುತ್ತ ಹಿಂದೆ ನಿಂತಿರಬೇಕು.

ವಿರಾಟನ ಸೇನೆಯಂತು ಮೊದಲ ದಿನ ಭೀಷ್ಮರ ವಿರುದ್ಧ ಅನನ್ಯವಾಗಿ ಹೋರಾಡಿತ್ತು. ಅದರ ಫಲವಾಗಿ ವಿರಾಟ ಮೊದಲ ದಿನವೇ ತನ್ನಿಬ್ಬರು ಮಕ್ಕಳನ್ನು ಕಳೆದುಕೊಂಡ : ಉತ್ತರ ಮತ್ತು ಶ್ವೇತ. ಈ ಶ್ವೇತನೇ ವಿರಾಟನ ಕಡೆಯ ಸೇನಾಪತಿಯಾಗಿದ್ದ. ಸೇನಾಪತಿಯನ್ನೆ ಕಳೆದುಕೊಂಡ ಮತ್ಸ್ಯದೇಶದ ಪಡೆಯ ಹಾನಿ ಬಹಳ ದೊಡ್ಡದು. ಅನಂತರ ವಿರಾಟನ ಇನ್ನೊಬ್ಬ ಮಗ ಶಂಖ ಸೇನಾಪತಿಯಾಗಿ ಈ ಪಡೆಯ ನೇತಾರನಾದ.

ಲೇಖಾಂಕ: ೨೪

# ಭಗವದ್‌ಗೀತೆ

–ಬನ್ನಂಜೆ ಗೋವಿಂದಾಚಾರ್ಯ

ಇಲ್ಲಿಗೆ ಗೀತೆಯ ೧೮ ಶ್ಲೋಕಗಳು ಮುಗಿದವು. ೧೮ ಶಂಖನಾದಗಳ ವಿವರಣೆಯೂ ಮುಗಿಯಿತು. ಕೌರವ ಸೇನೆಯಲ್ಲಿ ಇದರ ಪ್ರತಿಕ್ರಿಯೆಯೇನು? ಅದಕ್ಕಾಗಿ ೧೯ನೆಯ ಶ್ಲೋಕ :

**ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ ।**
**ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ ॥**

[ಆ ಮೊಳಗು, ನೆಲಮುಗಿಲುಗಳನ್ನು ತುಂಬಿ ಮಾರ್ಮೊಳಗುತ್ತ, ಗೊಂದಲಗೊಳಿಸಿ ಕೌರವರ ಎದೆಗೆಡಿಸಿತು].

ಮೊದಲು ಕೌರವ ಸೇನೆಯ ಕಡೆಯಿಂದ ಶಂಖನಾದ ಕೇಳಿಸಿತ್ತು. ಅದರಿಂದ ಪಾಂಡವರು, ಪಾಂಡವ ಸೇನೆ ಎದೆಗೆಡಲಿಲ್ಲ. ತಾವು ಅಷ್ಟೇ ಹುಮ್ಮಸ್ಸಿನಿಂದ ಪ್ರತಿಧ್ವನಿ ನೀಡಿದರು. ಆದರೆ ಪಾಂಡವರ ಶಂಖನಾದ ಕೇಳಿದ ಕೌರವರ ಪಾಡು ಏನಾಯಿತು? ಅವರು ಹುಮ್ಮಸ್ಸು ಕಳೆದುಕೊಂಡರು! ಈ ಸದ್ದು ಕೇಳಿ ಅವರ ಎದೆ ಒಡೆದಂತಾಯಿತು : ಅವರ ಎದೆಯ ಮೇಲೆಯೇ ಬಡಿದಂತಾಯಿತು : "**ಹೃದಯಾನಿ ವ್ಯದಾರಯತ್**".

ಬಡಿದದ್ದು ಶಂಖದ ಸದ್ದು. ಬಾಣವಲ್ಲ. ಬಡಿದದ್ದು ಕಿವಿಗೆ. ಎದೆಗಲ್ಲ. ಆದರೆ ಕೌರವರು ಬಾಣಗಳೇ ತಮ್ಮೆದೆಯ ಮೇಲೆ ಬಂದು ಬಿದ್ದಂತೆ ಗಲಿಬಿಲಿಗೊಂಡರು. ಎದೆಯೆ ಬಿರಿದುಹೋದಂತೆ ಕಳವಳಗೊಂಡರು. ಇದು ಅವರ ಮನಃಸ್ಥಿತಿಯ ಸ್ಪಷ್ಟ ಚಿತ್ರ. ಮುಂದಿನ ಯುದ್ಧದ ಫಲಿತಾಂಶದ ಶಕುನವೂ ಹೌದು.

ನಿಜವಾಗಿ ಇದು ಅದಲುಬದಲಾಗಬೇಕಿತ್ತು : ಕೌರವ ಶಂಖನಾದ ಕೇಳಿ ೭ ಅಕ್ಷೋಹಿಣಿ ಸೇನೆಯ ಜತೆ ಯುದ್ಧಕ್ಕೆ ಬಂದ ಪಾಂಡವರು ಎದೆಗೆಡಬೇಕಿತ್ತು; ಪಾಂಡವ ಶಂಖನಾದ ಕೇಳಿ ೧೧ ಅಕ್ಷೋಹಿಣಿ ಸೇನೆಯ ಜತೆ ಸನ್ನದ್ಧರಾದ ಕೌರವರು ಉತ್ಸಾಹ ತುಂಬಿ ಮುಂದುವರಿಯಬೇಕಿತ್ತು. ಹಾಗಾಗಲಿಲ್ಲ. ಕೌರವ ಎಷ್ಟು ಉತ್ಸಾಹ ತುಂಬಿಕೊಂಡರೂ, ಎಷ್ಟು ಆತ್ಮಸಮರ್ಥನೆ ಮಾಡಿಕೊಂಡರೂ ಅದು ಅವನ ಹೊರಕವಚವಾಗಿಯೇ ಉಳಿಯಿತು. ಅವನ ಅಂತಃಸಾಕ್ಷಿ ಅವನಿಗೆ ಕೈಕೊಟ್ಟಿತು.

ದುರ್ಯೋಧನ ಮತ್ತು ಅವನ ತಮ್ಮಂದಿರ ಪಾಡೇ ಹೀಗಾದಮೇಲೆ ಅವರನ್ನು ನಂಬಿ ಯುದ್ಧಕ್ಕೆ ಬಂದ ೧೧ ಅಕ್ಷೋಹಿಣಿಯ ಪಾಡು ಏನಾಗಿರಬೇಡ! ಈ ಊಹೆಯನ್ನು ಧೃತರಾಷ್ಟ್ರನ ಪಾಲಿಗೆ ಬಿಟ್ಟು ಸಂಜಯ ಮೌನ ವಹಿಸುತ್ತಾನೆ. ಪಾಂಡವರ ಶಂಖನಾದದಿಂದ ಕೌರವರ ಎದೆಯೊಡೆಯಿತು. ಸಂಜಯನ ಬಿಚ್ಚು ಮಾತಿನಿಂದ ಧೃತರಾಷ್ಟ್ರನ ಎದೆ ಒಡೆಯಿತು!

ಇಲ್ಲಿ ಒಂದು ವಿಚಿತ್ರವಾದ, ಅಸಹಜ ಎನ್ನುವಷ್ಟು ವಿಚಿತ್ರವಾದ, ಪ್ರಯೋಗ ಬಂದಿದೆ: "**ಧಾರ್ತರಾಷ್ಟ್ರಾಣಾಂ ಹೃದಯಾನಿ**" –ಧೃತರಾಷ್ಟ್ರನ ಮಕ್ಕಳ ಹೃದಯಗಳು! ಇದು ಸರಿಯೆ?

ಸಂಜಯ ಧೃತರಾಷ್ಟ್ರನ ಬಳಿ ಮಾತನಾಡುತ್ತಿದ್ದಾನೆ. ಅದರಿಂದ "ನಿನ್ನ ಮಕ್ಕಳ ಎದೆ ಒಡೆಯಿತು" ಅನ್ನಬೇಕು. ಬದಲಾಗಿ "ಧೃತರಾಷ್ಟ್ರನ ಮಕ್ಕಳ ಎದೆ ಒಡೆಯಿತು" ಎಂದು ಪರೋಕ್ಷವಾಗಿ ಹೇಳುತ್ತಾನೆ. ಹೀಗೆ ಯಾರಾದರೂ ಮಾತನಾಡುವುದುಂಟೆ? ಭಾಷಾನಿಯಮದ ದೃಷ್ಟಿಯಿಂದ ಇದು ಸರಿಯೆ?

ಕೆಲವರು ಹೀಗೆ ಹೇಳಬಹುದು : 'ಇದು ಸರಿಯಾದ ನೇರ ಮಾತಲ್ಲ. ಗ್ರಂಥಕಾರರಾದ ವ್ಯಾಸರ ಅನುವಾದ. 'ನಿನ್ನ ಮಕ್ಕಳು' ಎಂದು ಸಂಜಯ ಹೇಳಿದ್ದನ್ನು ವ್ಯಾಸರು ಗ್ರಂಥದಲ್ಲಿ ಪರೋಕ್ಷವಾಗಿ 'ಧೃತರಾಷ್ಟ್ರನ ಮಕ್ಕಳು' ಎಂದು ಉಲ್ಲೇಖಿಸಿದರು.

ಇದು ತೃಪ್ತಿಕರವಾದ ಸಮಾಧಾನವಲ್ಲ. ಈ ಮಾತುಗಳ ಪ್ರಾರಂಭದಲ್ಲಿ **'ಸಂಜಯ ಉವಾಚ'** ಎಂದು ಬಂದಿದೆ. ಇದು ಸಂಜಯ ಹೇಳಿದ ಮಾತು ಎಂದಮೇಲೆ ಆವನು ಹೇಳಿದ ರೀತಿಯಲ್ಲಿಯೇ ದಾಖಲಿಸಬೇಕಲ್ಲವೇ? ವ್ಯಾಸರು ಅದನ್ನು ತನ್ನ ಮಾತಿನಂತೆ ಪರಿವರ್ತಿಸಿ ಹೇಳುವಂತಿಲ್ಲ. ಇದು ಭಾಷಾನಿಯಮಕ್ಕೆ ಅಸಂಗತವೆ ಆಗುತ್ತದೆ.

ಮೇಲುನೋಟಕ್ಕೆ ಈ ಆಕ್ಷೇಪ ನಿಜ. ಆದರೆ ಪ್ರಾಚೀನಕಾಲದ ಒಂದು ಸಂಪ್ರದಾಯವನ್ನು ನಾವು ನೆನಪಿಡಬೇಕು. ಹಿಂದೆ, ವೈದಿಕಕಾಲದಲ್ಲಿ, ಪುರಾಣ ಕಾಲದಲ್ಲಿ ತಂದೆಯ ಹೆಸರಿಂದಲೆ ಮಕ್ಕಳಿಗೆ ಹೆಸರಿಡುವ ಸಂಪ್ರದಾಯವಿತ್ತು : ಶುನಕನ ಮಗ ಶೌನಕ. ಅವನಿಗೆ ಬೇರೆ ಹೆಸರಿಲ್ಲ. ಶುನಕನ ಎದುರಿನಲ್ಲು ಅವನನ್ನು ಶೌನಕನೆಂದೇ ಕರೆಯುವುದು. 'ನಿನ್ನ ಮಗನೆಂದಲ್ಲ'.

ಹೆಣ್ಮಕ್ಕಳಲ್ಲಂತು ಇದು ಪ್ರಚುರವಾಗಿತ್ತು : ಕೇಕೆಯ ರಾಜನ ಮಗಳು ಕೈಕೇಯಿ. ಕೋಸಲರಾಜನ ಮಗಳು ಕೌಸಲ್ಯೆ. ಮದ್ರರಾಜನ ಮಗಳು ಮಾದ್ರಿ. ಇವರಿಗೆ ಬೇರೆ ಹೆಸರೇನಾದರೂ ಇತ್ತೇ ಎನ್ನುವುದೇ ಸಂದೇಹ.

ಇಲ್ಲೂ ಹೀಗೆಯೆ. ಧೃತರಾಷ್ಟ್ರನ ಮಕ್ಕಳಿಗೆ ಒಬ್ಬೊಬ್ಬರಿಗೆ ಬೇರೆಬೇರೆ ಹೆಸರಿದ್ದರೂ ಸಮಷ್ಟಿಯಾಗಿ ಕೌರವರು ಅಥವ ಧಾರ್ತರಾಷ್ಟ್ರರು ಎಂದು ಕರೆಯುವುದು ಆಗ ರೂಢಿಯ ಲ್ಲಿತ್ತು. ಪಾಂಡವರೂ ಕುರುವಂಶದವರೇ ಅದರೂ ಅವರನ್ನು ಕೌರವರು ಎಂದು ಕರೆಯುವ ರೂಢಿಯಿರಲಿಲ್ಲ ಎನ್ನುವುದು ಇಲ್ಲಿ ಗಮನಿಸಬೇಕು. ಅದರಿಂದ ಈ ಪದಗಳು ಯೋಗಾರ್ಥದಲ್ಲಿ ಬಂದದ್ದಲ್ಲ ಎನ್ನುವುದು ಸ್ಪಷ್ಟ. 'ಕೌರವರು' ಎನ್ನುವುದು ಹೇಗೆ ಆ ನೂರು ಮಂದಿಗೆ ವ್ಯವಹಾರದಲ್ಲಿ ಬಂದ ರೂಢನಾಮವೋ ಹಾಗೆಯೆ ಧಾರ್ತರಾಷ್ಟ್ರರು ಎನ್ನುವುದು ಒಂದು ರೂಢನಾಮ. ಇಲ್ಲಿ ಯೋಗಾರ್ಥದ ವಿವಕ್ಷೆಯಿಲ್ಲ. ಸಂಸ್ಕೃತ ಸಾಹಿತ್ಯದಲ್ಲಿ, ವಿಶೇಷತಃ ಪೌರಾಣಿಕ ಸಾಹಿತ್ಯದಲ್ಲಿ, ಇಂಥ ಪ್ರಯೋಗಗಳು ಧಾರಾಳವಾಗಿ ದೊರುಕುತ್ತವೆ.

ಇದು ಒಂದು ಮುಖ. ಈ ಶಬ್ದಪ್ರಯೋಗದ ಹಿಂದಣ ಕಾಕುಧ್ವನಿಯನ್ನು ಗಮನಿಸಿದರೆ ಇದರ ಯೋಗಾರ್ಥವೂ ಕೂಡ ಒಂದು ಹೊಸ ಆಯಾಮದಲ್ಲಿ ತೆರೆದುಕೊಳ್ಳುತ್ತದೆ.

ಧೃತರಾಷ್ಟ್ರ ಕೌರವರ ಬಗೆಗೆ ಹೇಳುವಾಗ **'ಮಾಮಕಾಃ'**- ನನ್ನವರು ಎಂದ. ಅದನ್ನು ಗಮನಿಸಿದ ಸಂಜಯ ಅದಕ್ಕೆ ಉತ್ತರವಾಗಿ 'ಧಾರ್ತರಾಷ್ಟ್ರರು' ಎಂದು ಹೇಳುತ್ತಾನೆ. ಇಲ್ಲಿ ಧೃತರಾಷ್ಟ್ರನ ಪುತ್ರವ್ಯಾಮೋಹದ ದೌರ್ಬಲ್ಯವನ್ನು ಎತ್ತಿ ತೋರಿಸುವುದು ಸಂಜಯನ ಉದ್ದೇಶವಾಗಿತ್ತು.

ಒಬ್ಬ ವ್ಯಕ್ತಿಯ ಜತೆಗೆ ಮಾತನಾಡುವಾಗಲೂ ಪ್ರಶಂಸೆಯ ಅಥವಾ ಆಕ್ಷೇಪದ ಧ್ವನಿಯಲ್ಲಿ ಪರೋಕ್ಷವಾಗಿಯೂ ಮಾತನಾಡುವುದುಂಟು. ಆಗ ಧ್ವನಿಗೆ ಹೆಚ್ಚು ಒತ್ತು ಬರುತ್ತದೆ.

ಒಬ್ಬ ವಿದ್ವಾಂಸರಾದ ಉಪಾಧ್ಯಾಯರಿರುತ್ತಾರೆ. ಅವರಿಗೆ ಅವರಂತೆಯೆ ವಿದ್ವಾಂಸರಾದ ಒಬ್ಬ ಮಗನಿರುತ್ತಾನೆ. ಅದನ್ನು ಮೆಚ್ಚಿದ ಮಿತ್ರನೊಬ್ಬ ಉಪಾಧ್ಯಾಯರ ಬಳಿ ಹೇಳುತ್ತಾನೆ : "ಅವನು ಉಪಾಧ್ಯಾಯರ ಮಗನಲ್ಲವೆ?" 'ನಿಮ್ಮಮಗನಲ್ಲವೆ?' ಎನ್ನುವುದಕ್ಕಿಂತಲು 'ಉಪಾಧ್ಯಾಯರ ಮಗನಲ್ಲವೆ' ಎನ್ನುವಲ್ಲಿರುವ ಧ್ವನಿಯ ಭಾರ ಹೆಚ್ಚು. ಅವರ ವ್ಯಕ್ತಿತ್ವದ ಪೂರ್ಣ ಮುಖವನ್ನು ಪರೋಕ್ಷ ನಿರ್ದೇಶ ಸಮರ್ಥವಾಗಿ ಧ್ವನಿಸುತ್ತದೆ. ಸಂಜಯ ಈ ತಂತ್ರವನ್ನೇ ಇಲ್ಲಿ ಬಳಸಿದಂತಿದೆ.

ಏನಿದ್ದರೂ ಅವರು ಧೃತರಾಷ್ಟ್ರನ ಮಕ್ಕಳಲ್ಲವೆ. ಧೃತರಾಷ್ಟ್ರನ ದೌರ್ಬಲ್ಯದ ಫಲವನ್ನು ಅವನೂ ಅವನ ಮಕ್ಕಳೂ ಜತೆಯಾಗಿ ಅನುಭವಿಸಬೇಕು– ಎಂದು ಸಂಜಯ ಹೇಳುತ್ತಾನೆ. ಧೃತರಾಷ್ಟ್ರನಾಗಲಿ ಅವನ ಮಕ್ಕಳಾಗಲಿ

ತನಗೆ ಏನೂ ಅಲ್ಲ ಎನ್ನುವಂತೆ ಸಂಜಯ ದೂರ ನಿಂತು ತಟಸ್ಥನಾಗಿ ಮಾತಾನಾಡುತ್ತಾನೆ. ಈ ಅಪೂರ್ವ ಪ್ರಯೋಗದಲ್ಲಿ ಧೃತರಾಷ್ಟ್ರನ ಪುತ್ರವ್ಯಾಮೋಹದ ಸ್ವಾರ್ಥ ಮತ್ತು ಸಂಜಯನ ನಿರ್ಲಿಪ್ತತೆ ಎರಡೂ ಸಮರ್ಥವಾಗಿ ಧ್ವನಿತವಾಗುತ್ತದೆ.

ಶ್ಲೋಕದ ಉತ್ತರಾರ್ಧ ಶಂಖನಾದದ ವ್ಯಾಪ್ತಿಯನ್ನು ವಿವರಿಸುತ್ತದೆ. ಅದು ಕೌರವರ ಎದೆಯಾಳಕ್ಕೆ ಇಳಿಯಿತು: ಮಾತ್ರವಲ್ಲ, ಮುಗಿಲೆತ್ತರಕ್ಕೆ ಹಬ್ಬಿಕೊಂಡಿತು. ಒಂದು ನಾದ ಹತ್ತು ನಾದವಾಗಿ ದಿಗ್‌ದಿಗಂತಗಳಲ್ಲಿ ಮಾರ್ಮೊಳಗಿತು.

ಮೊದಲೇ ಅದು ಬರಿಯ ನಾದವಾಗಿರಲಿಲ್ಲ; ಘೋಷವಾಗಿತ್ತು : **'ಸ ಘೋಷಃ'**. ಘೋಷವೆಂದರೆ ದೊಡ್ಡ ದನಿ– ಮೊಳಗು. ದನಿ ಎಬ್ಬಿಸಿದ ಶಂಖಗಳೂ ಸಾಮಾನ್ಯ ಶಂಖಗಳಲ್ಲ. ಹೆಸರಾಂತ ಶಂಖಗಳು. ದನಿಯೂ ಸಾಮಾನ್ಯವಾದದ್ದಲ್ಲ. ದೊಡ್ಡ ಮೊಳಗು, ಅದಕ್ಕೆಂದೆ ಕಿವಿಗಡಚಿಕ್ಕುವಂತೆ ಮಾರ್ಮೊಳಗಿತು.

ಅನುನಾದ ಎಂದರೆ ಪ್ರತಿಧ್ವನಿ–ಮಾರ್ಮೊಳಗು. ಇದು ಬರಿಯ ಅನುನಾದ ಅಷ್ಟೆಯಲ್ಲ– ವ್ಯನುನಾದ [ವಿ+ಅನುನಾದ=ವಿಶಿಷ್ಟವಾದ ಪ್ರತಿಧ್ವನಿ]. ಬಹುಹೊತ್ತು ಪ್ರತಿಧ್ವನಿ ಸಂತಾನವನ್ನೆ ನಿರ್ಮಿಸುವ ದೀರ್ಘ ಪ್ರತಿಧ್ವನಿ; ಕಿವಿಮುಚ್ಚಿಕೊಂಡರೂ ಎದೆಯಾಳದಲ್ಲಿ ಬೇರು ಬಿಟ್ಟು ಕೆಂಗೆಡಿಸುವ ಮಾರ್ಮೊಳಗು. [ವೇದಾಂತದೇಶಿಕರ ಪಾಠದಲ್ಲಿ **'ವಿ'** ಎನ್ನುವ ಉಪಸರ್ಗವಿಲ್ಲ. ಅವರ ಪ್ರಕಾರ ಗೀತೆಯ ಪಾಠ **"ತುಮುಲೋಽಪ್ಯನುನಾದಯನ್"**].

ಯಾವ ಕಡೆಯೆಲ್ಲ ಪ್ರತಿಧ್ವನಿಸಿತು?– **"ನಭಶ್ಚ ಪೃಥಿವೀಂ ಚೈವ"**. ಇಡಿಯ ನೆಲ–ಮುಗಿಲುಗಳ ತುಂಬೆಲ್ಲ ಪ್ರತಿಧ್ವನಿಸಿತು. ದಿಗ್‌ದಿಗಂತಗಳನ್ನು ವ್ಯಾಪಿಸಿತು.

ಇದರ ಭಾವ ಹೀಗೆ : ಅಂದಿನ ಯುದ್ಧಕ್ಕೆ ನಿಯುಕ್ತರಾಗಿ ಕುರುಕ್ಷೇತ್ರದ ಮುಂಚೂಣಿಯಲ್ಲಿ ನೆರೆದ ಸೇನೆಯ ಮಂದಿ ಮಾತ್ರವೆ ಅಲ್ಲ; ಮುಂದಿನ ಯುದ್ಧಕ್ಕಾಗಿ ಸರದಿ ಕಾಯುತ್ತ ಶಿಬಿರದಲ್ಲಿ ಉಳಿದಿದ್ದ ಸೇನಾನಾಯಕರು, ಸೈನಿಕರು, ಪರಿವಾರದವರು ಕೂಡ ಈ ಸದ್ದು ಕೇಳಿ ಕಂಗೆಟ್ಟರು; ಭವಿಷ್ಯದ ಭರವಸೆಯನ್ನು ಕಳೆದುಕೊಂಡರು.

ಅದಕೆಂದೆ ಅದು **'ತುಮುಲ'**ವಾಯಿತು. ತುಮುಲ ಎಂದರೆ ಗೊಂದಲ. ಇದಕ್ಕೆ ಎರಡು ಮುಖಗಳು : ಒಂದು ಹೊರಗಿನ ತುಮುಲ; ಇನ್ನೊಂದು ಒಳಗಿನ ತುಮುಲ.

ಸದ್ದಿನ ಗದ್ದಲವೆ ಹೊರಗಿನ ತುಮುಲ. ಇದನ್ನೇ **"ನಭಶ್ಚ ಪೃಥಿವೀಂ ಚೈವ ವ್ಯನುನಾದಯನ್"** ಎನ್ನುವುದು ವಿವರಿಸುತ್ತದೆ. ಈ ಸದ್ದು ಕೇಳಿ ಒಳಬಗೆಯಲ್ಲಿ ಮೂಡುವ ಕಳವಳ, ವ್ಯಾಕುಲತೆ, ಅಧೈರ್ಯಗಳೇ ಒಳಗಿನ ತುಮುಲ. ಈ ಒಳಬಗೆಯ ಸಂಘರ್ಷವನ್ನೆ, ಆತ್ಮವಿಶ್ವಾಸದ ಕುಸಿತವನ್ನೇ **"ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್"** ಎನ್ನುವುದು ವಿವರಿಸುತ್ತದೆ.

ಈ ಪದ್ಯದ ಭಾವವನ್ನು ಆಚಾರ್ಯ ರಾಮಾನುಜರು ಹೀಗೆ ಸಂಗ್ರಹಿಸಿದ್ದಾರೆ :

"ಆ ಘೋಷವು ದುರ್ಯೋಧನ ಮುಂತಾದ ನಿನ್ನೆಲ್ಲ ಮಕ್ಕಳ ಎದೆಯನ್ನು ಭೇದಿಸಿತು. ಅರ್ಥಾತ್, 'ಕೌರವರ ಸೇನೆ ಗೆಲ್ಲುವ ಆಸೆ ಇಂದಿಗೆ ಕಮರಿತು" ಎಂದು ಎಲ್ಲ ಧಾರ್ತರಾಷ್ಟ್ರರೂ ಮನಗಂಡರು. ತನ್ನ ಮಕ್ಕಳ ವಿಜಯದ ಸುದ್ದಿಯನ್ನು ಕೇಳಲು ಆತುರನಾಗಿದ್ದ ಧೃತರಾಷ್ಟ್ರನಿಗೆ ಸಂಜಯ ಹೀಗೆಂದು ಹೇಳಿದ"

ಇಲ್ಲಿ **'ಧಾರ್ತರಾಷ್ಟ್ರಾಣಾಂ'** ಎಂಬ ಪದಕ್ಕೆ ಆಚಾರ್ಯ ರಾಮಾನುಜರು 'ನಿನ್ನ ಮಕ್ಕಳ' (ಭವತ್ ಪುತ್ರಾಣಾಂ) ಎಂದು ವ್ಯಾಖ್ಯಾನಿಸಿರುವುದು ಗಮನಾರ್ಹ. ಇದು ಹಿಂದೆ ನೀಡಿದ ವಿವರಣೆಗೆ ಪುಷ್ಟಿ ನೀಡುತ್ತದೆ.

❋❋❋❋

**<u>ಲೇಖಾಂಕ: ೨೫</u>**

# ಭಗವದ್ಗೀತೆ

**–ಬನ್ನಂಜೆ ಗೋವಿಂದಾಚಾರ್ಯ**

ಎರಡೂ ಕಡೆಯವರು ಶಂಖನಾದ ಮಾಡಿದರು, ತಮ್ಮ ಯುದ್ಧ ಸನ್ನಾಹವನ್ನು ಸಾರಿದರು, ಮುಂದೇನಾಯಿತು? ಮುಂದಿನ ಶ್ಲೋಕ ಅನಂತರದ ಬೆಳವಣಿಗೆಯನ್ನು ವಿವರಿಸುತ್ತದೆ.

**ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ।**
**ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ॥೨೦॥**
**ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ।**
**ಅರ್ಜುನ ಉವಾಚ–**
**ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ॥೨೧॥**

[ಮಹಾರಾಜನೆ, ಶಂಖದ ಸದ್ದಡಗಿದಾಗ ಕೌರವರು ಯುದ್ಧಕ್ಕೆ ಅಣಿಯಾಗಿ ನಿಂತರು. ಆಯುಧಗಳನ್ನು ಎಸೆಯಲು ಇನ್ನೇನು ಪ್ರಾರಂಭವಾಗಬೇಕು, ಇದನ್ನು ಗಮನಿಸಿದ ಕಪಿಧ್ವಜನಾದ ಅರ್ಜುನ, ಅಂಥ ಸಂದರ್ಭದಲ್ಲಿ, ಬಿಲ್ಲನ್ನು ಕೈಗೆತ್ತಿಕೊಂಡು ಕೃಷ್ಣನನ್ನು ಕುರಿತು ಹೀಗೆಂದು ಹೇಳಿದನು : "ಓ ಅಚ್ಯುತನೆ, ಎರಡೂ ಸೇನೆಗಳ ನಡುವೆ ನನ್ನ ರಥವನ್ನು ನಿಲ್ಲಿಸು"].

ಕೌರವಸೇನೆಯ ಸನ್ನಾಹವನ್ನು **'ವ್ಯವಸ್ಥಿತಾನ್'** ಎಂಬ ಶಬ್ದ ವಿವರಿಸುತ್ತದೆ. [**ವಿ+ಅವಸ್ಥಿತಾನ್; ವಿಶೇಷತಃ=ಯುಯುತ್ಸಯಾ ಅವಸ್ಥಿತಾನ್**]. "ವ್ಯವಸ್ಥಿತರು" ಎಂದರೆ ಹೋರಾಟಕ್ಕಾಗಿ ನಿಂತವರು. ಯುದ್ಧಕ್ಕೆ ಅವಶ್ಯವಾದ ವ್ಯೂಹಗಳನ್ನು ರಚಿಸಿ ವ್ಯವಸ್ಥೆಯಿಂದ ನಿಂತವರು; well aarranged ಎನ್ನುವಂತೆ. ಯುದ್ಧಕ್ಕೆ ಸಜ್ಜಾಗಿ ಅಣಿಯಾಗಿ ನಿಂತವರು; well prepared ಎನ್ನುವಂತೆ. ಇವೆಲ್ಲ ಈ ಪದದ ಅರ್ಥಚ್ಛಾಯೆಗಳು.

ಒಟ್ಟಿನಲ್ಲಿ, ಅಥ=ಭೀಷ್ಮರು ಶಂಖನಾದದ ಮೂಲಕ ಯುದ್ಧ ಸಂಕೇತವನ್ನು ಕಳಿಸಿದ ಅನಂತರ, ಪಾಂಡವರು ತಾವೂ ಸಿದ್ಧ ಎಂದು ಶಂಖನಾದದ ಮಾರುತ್ತರದಿಂದಲೇ ಸೂಚಿಸಿದ ಅನಂತರ ಯಾವ ಕ್ಷಣಕ್ಕೂ ಹೋರಾಟ ತೊಡಗಬಹುದು ಎನ್ನುವ ಎಚ್ಚರದಿಂದ ಕೌರವಸೇನೆ ಸಜ್ಜಾಗಿ ನಿಂತಿತು. ಹೆದರಿದವರಿಗೆ ಸಿದ್ಧತೆಯೂ ಹೆಚ್ಚು– ಅಲ್ಲವೆ?

ಇಲ್ಲಿ 'ಧಾರ್ತರಾಷ್ಟ್ರ'ರು ಎಂದರೆ ಕೌರವರಷ್ಟೇ ಅಲ್ಲ. ಕೌರವನ ಕಡೆಯ ಸೇನೆಯ ಪ್ರಮುಖರೂ ಹೌದು. ಇಲ್ಲೂ ಒಂದು ವಿಶಿಷ್ಟವಾದ ಅರ್ಥಧ್ವನಿಯಿದೆ. ಅನೇಕ ಮಂದಿ ರಾಜರು–ಬಾಹ್ಲೀಕಾದಿಗಳು, ಇಲ್ಲೇ ಇದ್ದ ಭೀಷ್ಮ ದ್ರೋಣಾದಿಗಳು ಕೂಡ ಧೃತರಾಷ್ಟ್ರನ ಮೇಲಣ ಮಮತೆಯಿಂದ, ದಾಕ್ಷಿಣ್ಯದಿಂದ, ಮುಲಾಜಿನಿಂದ ಬಂದವರು– ಹೊರತು ದುರ್ಯೋಧನನ ಆಣತಿಗೆ ಹೆದರಿ ಬಂದವರಲ್ಲ. ಅದಕ್ಕೆಂದೆ ಅವರನ್ನು ದುರ್ಯೋಧನನ ಪಕ್ಷದವರು ಎನ್ನುವ ಬದಲು ಧೃತರಾಷ್ಟ್ರನ ಕಡೆಯವರು, ಧಾರ್ತರಾಷ್ಟ್ರರು ಎನ್ನುತ್ತಾನೆ ಸಂಜಯ!

ಎದುರು ಕಡೆಯ ಸಜ್ಜು–ಸನ್ನಾಹವನ್ನು ಅರ್ಜುನ ಕಂಡ. ಕಂಡು ಕಂಗೆಡಲಿಲ್ಲ. ಅವನು ಸ್ವತಃ ವೀರ ನಿಜ, ಅಷ್ಟೇ ಅಲ್ಲ; ಅವನೀಗ ಕಪಿಧ್ವಜನಾಗಿದ್ದಾನೆ. ರಾಮಾಯಣದ ಆಂಜನೇಯ ಅವನ ರಥದಲ್ಲಿ, ಧ್ವಜದಲ್ಲಿ ಬಂದು ಕುಳಿತು ಎದುರಾಳಿಗಳ ಎದೆಗೆಡಿಸುತ್ತಿದ್ದಾನೆ.

[ಈ ಮಾತಿನ ಹಿನ್ನೆಲೆ ತಿಳಿಯಬೇಕಾದರೆ ಹಿಂದಿನ ಪ್ರಸಂಗವೊಂದನ್ನು ಇಲ್ಲಿ ಗಮನಿಸಬೇಕು. ಸೌಗಂಧಿಕವನ್ನು ತರಲೆಂದು ಭೀಮ ಹೊರಟಾಗ ದಾರಿಯಲ್ಲಿ ಆಂಜನೇಯ ಕಾಣಿಸಿದ. ಭೀಮನದೇ ಪೂರ್ವರೂಪ, ಈ ಎರಡು ರೂಪಗಳಲ್ಲಿ ಒಂದು ನಾಟಕ ನಡೆಯಿತು. ದಾರಿಗಡ್ಡವಾದ ಕಪಿಯನ್ನು ಬಾಲ ಸರಿಸುವಂತೆ ಭೀಮ ಹೇಳಿದ, ನೀನೇ ಸರಿಸು ಎಂದ ಹನುಮಂತ, ಮಹಾವೀರನಾದ ಭೀಮಸೇನನಿಗೆ ಕಪಿಯ ಬಾಲವನ್ನು ಕದಲಿಸುವುದೂ ಆಗಲಿಲ್ಲ. ಕಪಿಯ

ವಿರಾಡ್‌ರೂಪವನ್ನು ಕಂಡು ಭೀಮ ವಿಸ್ಮಿತನಾದ. ಆಗ ಪ್ರಸನ್ನನಾದ ಹನುಮಂತನೆ ತನ್ನ ಮೂಲ ರೂಪವನ್ನು ತಿಳಿಸಿ ಹೀಗೊಂದು ವರ ನೀಡುತ್ತಾನೆ].

**ಯದಾ ಸಿಂಹರವಂ ವೀರ ಕರಿಷ್ಯಸಿ ಮಹಾಬಲ ।**
**ತದಾಽಹಂ ಬೃಂಹಯಿಷ್ಯಾಮಿ ಸ್ವರವೇಣ ರವಂ ತವ ।**
**ಯಂ ಶ್ರುತ್ವೈವ ಭವಿಷ್ಯಂತಿ ವ್ಯಸವಸ್ಥೇಽರಯೋ ರಣೇ ।**
**ವಿಜಯಸ್ಯ ಧ್ವಜಸ್ಥಶ್ಚ ನಾದಾನ್ ಮೋಕ್ಷ್ಯಾಮಿ ದಾರುಣಾನ್ ।**
**ಶತ್ರೂಣಾಂ ಯೇ ಪ್ರಾಣಹರಾಃ ಸುಖಂ ಯೇನ ಹನಿಷ್ಯಥ ॥**

"ಭೀಮಸೇನ, ಮಹಾವೀರನಾದ ನೀನು ಸಿಂಹನಾದ ಮಾಡಿದಾಗ ನಿನ್ನ ದನಿಯ ಜತೆಗೆ ನನ್ನ ದನಿಯನ್ನೂ ಕೂಡಿಸಿ ಅದನ್ನು ಇಮ್ಮಡಿಗೊಳಿಸುತ್ತೇನೆ. ಆ ಸದ್ದು ಕೇಳಿಯೇ ನಿನ್ನ ಕೇಡಿಗರು ಎದೆಯೊಡೆದು ಸಾಯುತ್ತಾರೆ. ನಾನು ಅರ್ಜುನನ ಧ್ವಜದಲ್ಲಿ ಇದ್ದೂ ಭಯಾನಕವಾಗಿ ಗರ್ಜಿಸುತ್ತೇನೆ. ಅವೂ ಶತ್ರುಗಳ ಪ್ರಾಣವನ್ನು ಕಸಿಯಬಲ್ಲವು. ಪರಿಣಾಮವಾಗಿ ನೀವು ಅನಾಯಾಸವಾಗಿ ಶತ್ರುಗಳನ್ನು ತರಿದು ಜಯಶೀಲರಾಗುವಿರಿ".

ಇಂಥ ಹನುಮಂತ ಅರ್ಜುನನ ರಥದಲ್ಲಿ ಇದ್ದಾನೆ ಎಂದಾಗ ಎದುರಾಳಿಗಳು ಕಂಗೆಟ್ಟಿದ್ದು ಸಹಜವೆ. ಪಾಂಡವರ ನಿರ್ಭಯತೆಯು ಅರ್ಥಪೂರ್ಣ. ಅದಕ್ಕೆಂದೆ ಸಂಜಯ ಈ ಘಟ್ಟದಲ್ಲಿ ಸಾಕೂತವಾಗಿಯೆ ಅರ್ಜುನನ್ನು ಕಪಿಧ್ವಜನೆಂದು ಕರಯುತ್ತಾನೆ; ಅದರ ಮೂಲಕ ಧೃತರಾಷ್ಟ್ರನ ಒಳಬಗೆಯನ್ನು ಕೆದಕುತ್ತಾನೆ; ಒಳಗುದಿಯನ್ನು ಹೆಚ್ಚಿಸುತ್ತಾನೆ.

ಸಜ್ಜಿನ ವಿವರವನ್ನು ಮುಂದಿನ ಮಾತು ಹೇಳುತ್ತದೆ : "**ಪ್ರವೃತ್ತೇ ಶಸ್ತ್ರಸಂಪಾತೇ**".

ಈ ಮಾತನ್ನು ಗಮನಿಸಿದಾಗ ಶಸ್ತ್ರಸಂಪಾತ–ಹೊಡೆದಾಟ ಈಗಾಗಲೇ ಪ್ರಾರಂಭವಾಗಿಬಿಟ್ಟಿದೆ ಎಂದು ಕಾಣುತ್ತದೆ. ವಾಸ್ತವವಾಗಿ ಇನ್ನೂ ಯುದ್ಧ ಪ್ರಾರಂಭವಾಗಿಲ್ಲ. ಎರಡೂ ಕಡೆಯವರು ಸಿದ್ಧರಾಗಿ ನಿಂತಿದ್ದಾರೆ–ಅಷ್ಟೆ. ಹಾಗಾಗಿ ಈ ಮಾತಿನ ಅರ್ಥ 'ಇನ್ನೇನು ಯುದ್ಧ ಪ್ರಾರಂಭವಾಗುತ್ತದೆ ಎನ್ನುವಾಗ' ಎಂದಾಗುತ್ತದೆ. 'ಸದ್ಯದಲೇ ಪ್ರಾರಂಭವಾಗುತ್ತದೆ' ಎನ್ನುವುದನ್ನು ಒತ್ತು ಕೊಟ್ಟು ತಿಳಿಸಲು, 'ಇದೋ ಪ್ರಾರಂಭವಾಯಿತು' ಎಂದು ಹೇಳುವುದಿಲ್ಲವೆ? 'ಕೂಡಲೆ ಮಾಡುತ್ತೇನೆ' ಎನ್ನುವುದನ್ನು ತಿಳಿಸುವುದಕ್ಕಾಗಿ 'ಇದೋ ಮಾಡಿಬಿಟ್ಟೆ' ಎನ್ನುವುದಿಲ್ಲವೆ? ಹಾಗೆಯೇ ಈ ಪ್ರಯೋಗ.

ಶಂಖಧ್ವನಿಯನ್ನನುಸರಿಸಿ ಕೆಲವೆಡೆ ಸಣ್ಣ–ಪುಟ್ಟ ಹೋರಾಟ ಪ್ರಾರಂಭವಾಗಿದ್ದರೂ ಆಗಿರಬಹುದು. ಅದರೆ ಪ್ರಮುಖ ಯೋಧರು ಇನ್ನೂ ಹೋರಾಟಕ್ಕೆ ಇಳಿದಿಲ್ಲ ಎನ್ನುವುದು ಸ್ಪಷ್ಟ.

ಇಂಥ ಸಂದರ್ಭದಲ್ಲಿ ಎಲ್ಲರ ಜತೆಗೆ ಅರ್ಜುನನು ಸಜ್ಜಾಗಿ ನಿಂತ ಎನ್ನುತ್ತದೆ ಮುಂದಿನಮಾತು "**ಧನುರುದ್ಯಮ್ಯ ಪಾಂಡವಃ**".

ಪಾಂಡು ಪುತ್ರನಾದ ಅರ್ಜುನ ತಾನು ಬಿಲ್ಲನ್ನು ಎತ್ತಿ ಹಿಡಿದು ಯಾವುದೇ ಸಂದರ್ಭವನ್ನು ಎದುರಿಸಲು ಸಜ್ಜಾಗಿ ನಿಂತ.

ಇಲ್ಲಿ ಸಂಜಯ ಅರ್ಜುನನ್ನು '**ಪಾಂಡವ**' ಎಂದು ಕರೆದಿದ್ದಾನೆ. ಇದರಲ್ಲಿ ಒಂದು ಬಗೆಯ ಅಣಕವಿದೆ. ಧೃತರಾಷ್ಟ್ರ– "**ಮಾಮಕಾಃ ಪಾಂಡವಾಶ್ಚೈವ**" ಎಂದಿದ್ದ.

ನನ್ನ ಮಕ್ಕಳು ಮತ್ತು ಪಾಂಡವರು ಅಂದಾಗ **'ಪಾಂಡವ'** ಶಬ್ದದಲ್ಲಿ ಅವರು ತನಗೆ ಪರಕೀಯರು ಎನ್ನುವಂಥ ಧ್ವನಿಯಿತ್ತು. ಅದನ್ನೇ ಸಂಜಯ ತಿರುಗುಬಾಣವಾಗಿ ಬಳಸಿದ. ನೀನು ಅವರನ್ನು ಪಾಂಡವರು ಎಂದೆಯಲ್ಲ, ಅದೇ ನಿನ್ನ **'ಪಾಂಡವ'** ಧನುಸ್ಸನ್ನೆತ್ತಿ ನಿಂತ.

ಎದ್ದು ನಿಂತು ಮುಂದೇನು ಮಾಡಿದ : **"ಹೃಷೀಕೇಶಂ ತದಾ ವಾಕ್ಯಮಿದಮಾಹ"**. ಶ್ರೀ ಕೃಷ್ಣನ ಬಳಿ ಹೀಗೆಂದು ನುಡಿದ.

ಇಲ್ಲಿ ಕೃಷ್ಣನನ್ನು ಹೃಷೀಕೇಶ ಎಂದು ಕರೆಯಲಾಗಿದೆ. ಹೃಷೀಕೇಶ ಎಂದರೆ ಇಂದ್ರಿಯಗಳ ಸ್ವಾಮಿ. ನಮ್ಮ ಇಂದ್ರಿಯಗಳೊಳಗಿದ್ದು ಎಲ್ಲವನ್ನೂ ನಡೆಸುವವನು. ಅರ್ಜುನನ ಅಂತರಾಳದಲ್ಲಿ ಸಂಘರ್ಷವನ್ನು ಹೋಗಲಾಡಿಸುವುದಕ್ಕಾಗಿ ಅರ್ಜುನನ ಒಳಗಿದ್ದು ಅವನಿಂದ ಈ ಮಾತನ್ನು ಆಡಿಸಿದವನೂ ಶ್ರೀಕೃಷ್ಣನೇ–ಏಕೆಂದರೆ ಅವನು ಅರ್ಜುನನ ರಥದ ಸಾರಥಿ ಮಾತ್ರವಲ್ಲ–ಅವನ ಇಂದ್ರಿಯಾಶ್ವಗಳ ಸಾರಥ್ಯವೂ ಅವನದೇ ಎನ್ನುವ ಧ್ವನಿ ಈ ಮಾತಿನಲ್ಲಿದೆ.

ಧೃತರಾಷ್ಟ್ರನನ್ನು ಸಂಜಯ **'ಮಹೀಪತೇ'** ಎಂದು ಸಂಬೋಧಿಸುವ ಮೂಲಕವೂ ಮತ್ತೆ ಕೆಣಕುತ್ತಾನೆ. 'ಯುದ್ಧದ ಹೊಣೆ ನಿನ್ನದೇ. ಕೃಷ್ಣ ಸಂಧಾನ ಕಾಲದಲ್ಲಿ ಈ ಎಚ್ಚರ ನೀಡಿದ್ದ : **"ತ್ವಯ್ಯಾಯತ್ತಃ ಶಮೋ ರಾಜನ್"** [ಯುದ್ಧವಾಗದಂತೆ ತಡೆಯುವುದು ದೇಶದ ರಾಜನಾದ ನಿನ್ನ ಕೈಯಲ್ಲೇ ಇದೆ]. ನೀನು ಮಕ್ಕಳ ಮೇಲೆ ಹೊಣೆ ಹೊರಿಸಿ ತಪ್ಪಿಸಿಕೊಳ್ಳುವಂತಿಲ್ಲ. ನೀನೆ ಮಹೀಪತಿ. ನಿನ್ನ ಮಗ ಅಲ್ಲ. ಮುಂದಿನ ಬೆಳವಣಿಗೆಗಳಿಗೆಲ್ಲ ನೀನೆ ಹೊಣೆಗಾರ ಎಂದು ಇತಿಹಾಸ ದಾಖಲಿಸುತ್ತದೆ'. ಎನ್ನುವುದು ಸಂಜಯನ ಭಾವ.

ಅರ್ಜುನ ಏನು ಹೇಳಿದ : **"ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ"**. 'ಕೃಷ್ಣ, ಎರಡು ಸೇನೆಗಳ ನಡುವೆ ನನ್ನ ರಥವನ್ನು ನಿಲ್ಲಿಸು'.

ಎರಡೂ ಕಡೆಯ ಸಿದ್ಧತೆಯನ್ನು ತೂಗಿ ನೋಡುವುದಕ್ಕಾಗಿ ಅರ್ಜುನ ಎರಡು ಸೇನೆಯ ನಡುವೆ ನಿಂತು ಪರಿಕಿಸಬಯಸಿದ. ಅದಕ್ಕಾಗಿ ರಥವನ್ನು ಅತ್ತ ಒಯ್ಯುವಂತೆ ಕೃಷ್ಣನನ್ನು ನಿವೇದಿಸಿಕೊಂಡ. ಇಲ್ಲಿ ಕೃಷ್ಣನನ್ನು **'ಅಚ್ಯುತ'** ಎಂಬ ಪದದಿಂದ ಸಂಬೋಧಿಸಲಾಗಿದೆ. ಎಂದೂ ಚ್ಯುತಿಯಿರದ ಮಹಿಮೆ ಉಳ್ಳವನು ಅಚ್ಯುತ. ಅಂಥವನು ಸಾರಥಿಯಾಗಿರುವಾಗ ಅರ್ಜುನನಿಗಾದರೂ ಏನು ಕೊರತೆ? ಅದರಿಂದ ಅವನು ನಿರ್ಭಯವಾಗಿಯೆ ಸೇನೆಗಳ ನಡುವೆ ನಿಂತು ಪರೀಕ್ಷಿಸ ಬಯಸಿದ.